# ಉಪನಿಷತ್ಕಥಾವಳಿ





ಬರೆಹಗಾರರು :

ರಂಗನಾಥ ರಾಮಚಂದ್ರ ದಿವಾಕರ

ಮೂರನೆಯ ಆವೃತ್ತಿ

ಅಧ್ಯಾತ್ಮ ಕಾರ್ಯಾಲಯ, ಹುಬ್ಬಳ್ಳಿ

೧೯೫೨

# ಪ್ರಸ್ತಾವನೆ

( ಮೂರನೆಯ ಆವೃತ್ತಿ )

ಯಾವ ಜಾತಿಗೂ ಒಂದು ಪೂರ್ವೇತಿಹಾಸ, ಪರಂಪರೆ ಇರುವದುಂಟು. ನಮ್ಮ ಭಾರತೀಯ ಸಂಸ್ಕೃತಿಯ ಪರಂಪರೆ ಕನಿಷ್ಠ ಆರುಸಾವಿರ ವರುಷಗಳಿಂದ ನಡೆಯುತ್ತ ಬಂದಿದೆ ಎಂಬುದನ್ನು ಐತಿಹಾಸಿಕ ಪ್ರಮಾಣಗಳಿಂದ ಸಿದ್ಧ ಮಾಡಲು ಬರುವದು. ನಮ್ಮ ತತ್ತ್ವವಿಚಾರದ ಹಾಗೂ ಜೀವನಸ್ಥೈರ್ಯದ ಪರಂಪರೆಯು ವೇದೋಪನಿಷತ್ತುಗಳ ಕಾಲದಿಂದ ಸಾಗಿ ಬಂದಿರುವದು. ಉಪನಿಷತ್ತುಗಳಲ್ಲಿ ಉಕ್ತವಾದ ತತ್ತ್ವಜ್ಞಾನವು ಚಿರಂತನವಾದುದು. ಆದರೆ ಅದು ಗೂಢವಿರುವದರಿಂದ ಅದರ ಜ್ಞಾನವು ಆಬಾಲವೃದ್ಧರಿಗೂ ಆಗುವದು ಅಶಕ್ಯವು. ಪಾಶ್ಚಿಮಾತ್ಯ ತತ್ತ್ವಜ್ಞಾನದ ಪರಂಪರೆಯು ಪ್ಲೇಟೋ ಅರಿಸ್ಟಾಟಲ್ಲರಿಂದ ಪ್ರಾರಂಭಿಸುವಂತೆ ನಮ್ಮ ತತ್ತ್ವಜ್ಞಾನದ ಪರಂಪರೆ ಉಪನಿಷತ್ತುಗಳಿಂದ ಆರಂಭಿಸುವದು. ಪಾಶ್ಚಾತ್ಯ ತತ್ತ್ವಜ್ಞಾನವನ್ನು ತಿಳಿದುಕೊಳ್ಳಲು ಪ್ಲೇಟೋ ಅರಿಸ್ಟಾಟಲ್ಲರ ಗ್ರಂಥಗಳನ್ನು ಅಭ್ಯಸಿಸುವದು ಅವಶ್ಯವಿದ್ದಂತೆ ನಮ್ಮ ತತ್ತ್ವಜ್ಞಾನವನ್ನು ತಿಳಿದುಕೊಳ್ಳಲು ಅವರ ಗ್ರಂಥಗಳಿಗಿಂತ ಕನಿಷ್ಠ ಒಂದು ಸಾವಿರ ವರುಷಗಳಾದರೂ ಆಚೆಗಿನ ಉಪನಿಷದ್ಗ್ರಂಥಗಳನ್ನು ಓದಿ ತಿಳಿದುಕೊಳ್ಳುವದು ಅವಶ್ಯ.

ಆ ಉಪನಿಷದ್ಗ್ರಂಥಗಳ ಅಭ್ಯಾಸಕ್ಕೆ ಸಹಾಯಕವೆಂದು ಮತ್ತು ನಮ್ಮ ಸಂಸ್ಕೃತಿಯ ಪರಿಚಯದಾಯಕವಾಗಿ ಈ ಕಥಾವಲಿಯನ್ನು ಪ್ರಕಟಿಸಿದ್ದೇನೆ. ಓದಲು ಸುಲಭವಿರಬೇಕು, ಮನೋರಂಜಕವಿರಬೇಕು, ಆದರೆ ಅದೇ ಕಾಲಕ್ಕೆ ಮೂಲತತ್ತ್ವಗಳ ಬೋಧವಾಗಬೇಕು ಇದೇ ಈ ಕಥಾವಲಿಯ ಉದ್ದೇಶವು. ಹಳೆಯವಾದರೂ ಈ ವಿಚಾರಗಳು ಮಾಸಲಾರದವು, ಯಾಕಂದರೆ ಅವು ಪ್ರತಿಯೊಬ್ಬನ ಅನುಭವಕ್ಕೆ ಬರತಕ್ಕವುಗಳು ಹಾಗೂ ಆ ಅನುಭವದಿಂದ ನವ ಜೀವನವನ್ನು ಪಡೆಯತಕ್ಕಂಥವುಗಳು.

ಮೂಲ ಉಪನಿಷತ್ತುಗಳ ಹೆಚ್ಚಿನ ಅಭ್ಯಾಸ ಮಾಡಲಿಚ್ಛಿಸುವವರು ಉಪನಿಷತ್.ಪ್ರಕಾಶ, ಉಪನಿಷದ್ರಹಸ್ಯ ಮುಂತಾದ ಗ್ರಂಥಗಳನ್ನು ಅಭ್ಯಸಿಸ

ಬೇಕು. ಆದರೆ ಭಾರತೀಯರ ತತ್ವಜ್ಞಾನಮಂದಿರಕ್ಕೆ ಪ್ರವೇಶದ್ವಾರದಂತೆ ಈ ಚಿಕ್ಕ ಪುಸ್ತಕವಿರುವದು.

ಇದು ಈ ಪುಸ್ತಕದ ಮೂರನೆಯ ಆವೃತ್ತಿ. ಈ ಮೊದಲಿನಂತೆ ಕನ್ನಡಿಗರು ಇದನ್ನೂ ಮನ್ನಿಸುವರೆಂದು ಆಶಿಸುವೆ.

ನವದಿಲ್ಲಿ
೫ನೇ ಮೇ ೧೯೫೨

ರಂಗನಾಥ ದಿವಾಕರ

## ಪ್ರಸ್ತಾವನೆ

(೧ ಮತ್ತು ೨ ನೆಯ ಆವೃತ್ತಿ)

ಈ ಚಿಕ್ಕಪುಸ್ತಕದ ಮೊದಲನೆ ಆವೃತ್ತಿಯ ಪ್ರಸ್ತಾವನೆಯನ್ನು ೨೨-೧೨-೩೫ ದಿನ ಬರೆದೆನು. ಅದನ್ನೆ ಅಲ್ಲಿ ಇಲ್ಲಿ ತಿದ್ದಿ ಈ ಆವೃತ್ತಿಯ ಪ್ರಸ್ತಾವನೆಯೆಂದು ವಾಚಕರೆದುರಿಗೆ ಇಡುತಿರುವೆನು.

ಯಾವನೊಬ್ಬ ಮನುಷ್ಯನು ಇಡೀ ಜಗತ್ತಿನ ಸಮ್ರಾಟನಾದರೂ ಅವನಿಗೆ ಪೂರ್ಣ ಮನಃಶಾಂತಿಯು ದೊರೆಯದು. ಜಗತ್ತಿನೊಳಗಣ ಯಾವತ್ತೂ ಜಡವಸ್ತುಗಳ ಜ್ಞಾನವಾದರೂ ಅವನ ಜ್ಞಾನದ ಹಸಿವು ಹಿಂಗದು. ಯಾಕಂದರೆ ತನ್ನನ್ನು ತಾನು ಗೆಲ್ಲುವದೆ ಪೂರ್ಣಶಾಂತಿಯ ಸಾಧನಸರ್ವಸ್ವವು. ಆತ್ಮಜ್ಞಾನವೆ ಅಂದರೆ 'ತನ್ನ ತಾನರಿವುದೆ' ಜ್ಞಾನದ ಪರಮ ಸೀಮೆಯು. ಇದೇ ಮಾತನ್ನು 'ನ ವಿತ್ತೇನ ತರ್ಪಣೀಯೋ ಮನುಷ್ಯಃ'—ಮನುಷ್ಯನು ಸಂಪತ್ತಿಯಿಂದ ತೃಪ್ತನಾಗಲರಿಯನು, 'ಅಮೃತಸ್ಯ ತು ನ ಆಶಾ ಅಸ್ತಿ ವಿತ್ತೇನ'—ಸಂಪತ್ತಿಯಿಂದ ಅಮೃತತ್ವವು ಪ್ರಾಪ್ತವಾಗುವ ಆಶೆ ಬೇಡ, ಎಂಬ ಉಪನಿಷತ್-ವಾಕ್ಯಗಳು ಹೇಳುವವು. ಚಿರಶಾಂತಿದಾಯಕವಾದ ಆ ಜಿತೇಂದ್ರಿಯತ್ವವನ್ನೂ ಸರ್ವಕಾಮನಾಪೂರ್ತಿಮಯವಾದ ಆತ್ಮಜ್ಞಾನವನ್ನೂ ದೊರಕಿಸಿಕೊಡುವ ಕಾರ್ಯದಲ್ಲಿ ಉಪನಿಷತ್ತುಗಳಂಥ ಶ್ರೇಷ್ಠ ಸಾಧನಗಳು ಇನ್ನಾವೂ ಇಲ್ಲ. ಆರ್ಯರ ಎಲ್ಲಕ್ಕೂ ಹೆಚ್ಚಿನ ಗ್ರಂಥಗಳಲ್ಲಿ ಅವುಗಳಿಗೆ

ಅಗ್ರಪೂಜೆಯ ಮಾನವು ಇರುವದು. ತತ್ವಜ್ಞಾನ, ಸತ್ಯದ ಸಾಕ್ಷಾತ್ ದರ್ಶನ, ಸ್ಫೂರ್ತವಾಣಿಯಿಂದ ಸತ್ಯದ ದಿವ್ಯಪ್ರಕಾಶನ, ಸತ್ಯದ ಸರಳ ಪ್ರತಿಪಾದನ ಇವೆಲ್ಲವುಗಳನ್ನು ಒಂದೇ ಗ್ರಂಥದಲ್ಲಿ ಎಲ್ಲಿಯಾದರೂ ನೋಡಬೇಕಾಗಿದ್ದರೆ ಉಪನಿಷತ್ತಿನ ಕಡೆಗೆಯೆ ನಾವು ಹೋಗಬೇಕಾಗುವದು. ಆರ್ಯರ ಆಧ್ಯಾತ್ಮಿಕ ಅನುಭವಗಳ ಪರಿಪಕ್ವ ಫಲವನ್ನು ಸವಿಯಬೇಕಾಗಿದ್ದರೆ ಉಪ-ನಿಷತ್ತುಗಳನ್ನೆ ಓದಬೇಕಾಗುವದು. ಮುಂದೆ ಭಾರತವರ್ಷದಲ್ಲಿ ಶಾಖೋಪಶಾಖೆಗಳಾಗಿ ಬೆಳೆದ ವಿವಿಧ ದರ್ಶನಗಳ ಬೀಜಗಳೆಲ್ಲ ಈ ಉಪನಿಷತ್ತುಗಳಲ್ಲಿರುವವು. ಆದುದರಿಂದ ಈ ಉಪನಿಷತ್ತುಗಳನ್ನು ಎಷ್ಟು ಅಭ್ಯಸಿಸಿದರೂ ಕಡಿಮೆ ಎಂದು ಹೇಳಬಹುದು.

ಉಪನಿಷತ್ತುಗಳು ಬರೆಯಲ್ಪಟ್ಟ ಕಾಲವೆಂದರೆ ಕನಿಷ್ಠ ಎರಡು ಸಾವಿರ ವರುಷಗಳ ಆಚೆಗಿನದು. ವೇದಕಾಲದಲ್ಲಿ ಸ್ತುತಿಸ್ತೋತ್ರ, ಯಜ್ಞಯಾಗ ಇವುಗಳಿಗೆ ಅತಿಶಯ ಮಹತ್ವವಿದ್ದಂತೆ ಉಪನಿಷತ್ಕಾಲದಲ್ಲಿ ತಪಸ್ಸು, ಜ್ಞಾನಚರ್ಚೆ ಇವುಗಳಿಗೆ ಅತಿಶಯ ಮಹತ್ವವಿತ್ತು. ಈ ಬಗೆಯ ತಪಸ್ಸು ಮತ್ತು ಜ್ಞಾನಚರ್ಚೆ ಮಾಡುವ ಜ್ಞಾನಿಗಳ ಮತ್ತು ಜಿಜ್ಞಾಸುಗಳ ಚಿತ್ರವು ಉಪನಿಷತ್ತುಗಳಲ್ಲಿ ಚನ್ನಾಗಿ ರೇಖಿಸಲ್ಪಟ್ಟಿದೆ. ಯಜ್ಞಯಾಗಾದಿ ಬಾಹ್ಯಕರ್ಮಗಳಿಂದಾಗಲಿ ಸಗುಣದೇವತೆಗಳ ಉಪಾಸನೆಯಿಂದಾಗಲಿ ಪರಮಶಾಂತಿಯು ದೊರ-ಕದು, ಇವುಗಳಿಂದ ಪುಣ್ಯಲೋಕಗಳು—ಭಂಗುರವಾದ ಪುಣ್ಯಲೋಕಗಳು ಮಾತ್ರ ದೊರಕಬಲ್ಲವು, ಎಂದು ಉಪನಿಷತ್ಕಾರರ ಅಭಿಪ್ರಾಯವು. ಸರ್ವಾಂತರ್ಯಾಮಿಯಾದ ಪರಮಾತ್ಮನ ಜ್ಞಾನದಿಂದಲೆ ಪರಮಮೋಕ್ಷಸುಖವು ಪ್ರಾಪ್ತವಾಗಬಲ್ಲದು ಮತ್ತು ಆ ಜ್ಞಾನವು ಶ್ರದ್ಧೆ, ತ್ಯಾಗ, ಏಕಾಂತ, ತಪಸ್ಸು, ಧ್ಯಾನ, ಯೋಗ ಇವುಗಳಿಂದ ಪ್ರಾಪ್ತವಾಗಬಲ್ಲದು, ಎಂದು ಉಪನಿಷತ್ತುಗಳ ಸಿದ್ಧಾಂತವಿರುವದು.

ಈ ಮುಖ್ಯ ಸಂಗತಿಯನ್ನು ಉಪನಿಷತ್ಕಾರರು ಕೇವಲ ಒಣ ಒಣ ವಾಕ್ಯಗಳಿಂದ ಹೇಳದೆ ಒಮ್ಮೆ ಕಥಾರೂಪದಿಂದ, ಇನ್ನೊಮ್ಮೆ ಸಂವಾದರೂಪವಾಗಿ ಇಲ್ಲವೆ ಸುಂದರ ರೂಪಕಗಳ ಮುಖಾಂತರ ಅಥವಾ ಸ್ಫೂರ್ತ ಕಾವ್ಯಮುಖದಿಂದ ಹೇಳಿರುವರು. ಕೆಲವು ವ್ಯಕ್ತಿಗಳ ಚಿತ್ರಗಳನ್ನೂ ಒಳ್ಳೆ ಮನೋಹರವಾಗಿ ರೇಖಿಸಿ ಅವು ಯಾವಾಗಲೂ ಕೊರೆದ ಮೂರ್ತಿಗಳಂತೆ ಕಣ್ಣಮುಂದೆ ಕಟ್ಟುವ ಹಾಗೆ ಅವರು ಮಾಡಿದ್ದಾರೆ. ಉದಾಹರಣಾರ್ಥವಾಗಿ, ಉಪ-

ನಿಷತ್ತುಗಳನ್ನು ಓದಿದವರು ಮುದ್ದಾದ ನಚಿಕೇತನನ್ನು, ಜ್ಞಾನಿಯಾದ ಯಾಜ್ಞವಲ್ಕ್ಯನನ್ನು, ಉದಾರಧೀರನಾದ ಜನಕರಾಜನನ್ನು, ಒಣ ಗರ್ವದಿಂದ ಸೊಕ್ಕಿದ ಬಾಲಾಕಿಯನ್ನು ಮರೆಯುವದು ಶಕ್ಯವಿಲ್ಲ. ಆ ಕಾಲದ ಸಮಾಜ ಚಿತ್ರವೂ ಸ್ವಲ್ಪಮಟ್ಟಿಗೆ ಸ್ಪಷ್ಟರೀತಿಯಿಂದ ಈ ಚಿಕ್ಕ ಗ್ರಂಥಗಳಲ್ಲಿ ಪ್ರತಿಬಿಂಬಿತವಾಗಿದೆ. ಆದರೆ ಅದೆಲ್ಲ ಆನುಷಂಗಿಕವಿರುವದು. ಆತ್ಮಜ್ಞಾನವನ್ನು ಪ್ರತಿಪಾದಿಸುವದೆ ಉಪನಿಷತ್ಕಾರರ ಪ್ರಧಾನ ಉದ್ದೇಶವು.

ಇನ್ನು ಉಪನಿಷತ್ತುಗಳೆಂಬ ಅನೇಕ ಗ್ರಂಥಗಳಿದ್ದರೂ ಅವುಗಳಲ್ಲಿ ಈಶ, ಕೇನ, ಕಠ, ಮುಂಡಕ, ಮಾಂಡೂಕ್ಯ, ಪ್ರಶ್ನ, ಐತರೇಯ, ತೈತ್ತಿರೀಯ, ಛಾಂದೋಗ್ಯ ಮತ್ತು ಬೃಹದಾರಣ್ಯಕ ಈ ಹತ್ತು ಉಪನಿಷತ್ತುಗಳೆ ಮುಖ್ಯವಾದವುಗಳು ಮತ್ತು ಅತಿ ಪ್ರಾಚೀನವಾದವುಗಳು. ಈ ಗ್ರಂಥಗಳು ಇಷ್ಟು ಮಹತ್ವವುಳ್ಳವುಗಳಿದ್ದರೂ ಇವುಗಳನ್ನಭ್ಯಸಿಸುವದು ಜನಸಾಮಾನ್ಯರಿಗೆ ಸಾಧ್ಯವಾಗದೆ ಹೋಗಿದೆ. ಯಾಕಂದರೆ ಅವು ಬಹಳ ಪ್ರಾಚೀನವಿದ್ದು, ಸಂಸ್ಕೃತದಲ್ಲಿರುವವು ಮತ್ತು ಆರ್ಷಪ್ರಯೋಗಗಳಿಂದ ತುಂಬಿರುವವು. ಆದುದರಿಂದ ಅವುಗಳಲ್ಲಿರುವ ಜ್ಞಾನವನ್ನು ಇಲ್ಲಿ ನಾನು ಕಥಾರೂಪದಿಂದ ಕೊಡಲು ಹವಣಿಸಿರುವೆನು. ಇದ್ದಕ್ಕಿದ್ದ ಹಾಗೆ ಮೂಲ ಉಪನಿಷತ್ತುಗಳ ಅಭ್ಯಾಸವನ್ನು ಮಾಡಲಿಚ್ಛಿಸುವ ಕನ್ನಡಿಗರು ಉಪನಿಷತ್ಪ್ರಕಾಶವೆಂಬ ನನ್ನ ಗ್ರಂಥವನ್ನು ಓದಬಹುದು. ಇಲ್ಲಿ ಉಪನಿಷತ್ತುಗಳಲ್ಲಿರುವ ಸಣ್ಣಪುಟ್ಟ ಕಥೆಗಳನ್ನೆ ಸ್ವಲ್ಪ ವಿಸ್ತರಿಸಿ ಅವಶ್ಯವಿದ್ದಲ್ಲಿ ಕಥಾಭಾಗಗಳನ್ನು ಕಲ್ಪಿಸಿ ಆ ಗ್ರಂಥಗಳಲ್ಲಿರುವ ಉಪದೇಶದ ಸಾರವನ್ನು ಕೊಡಲು ನಾನು ಪ್ರಯತ್ನಿಸಿದ್ದೇನೆ. ಮೇಲೆ ಹೇಳಿದ ಹತ್ತು ಉಪನಿಷತ್ತುಗಳೊಳಗಿನ ತತ್ವಜ್ಞಾನದ ಯಾವ ಭಾಗವೂ ಉಳಿಯದಂತೆ ಅದನ್ನು ಈ ಕಥೆಗಳಲ್ಲಿ ಸೇರಿಸಿರುವೆನು. ಕಥೆಗಳನ್ನು ಸಹ ಆದಷ್ಟು ರುಚಿಕಟ್ಟಾಗುವಂತೆ ಬರೆಯಲು ಯತ್ನಿಸಿದ್ದೇನೆ.

'ತಾನು' ಯಾರು ಎಂಬುದನ್ನರಿತುಕೊಂಡು, ತನ್ನಲ್ಲಿಯ ಶಕ್ತಿಗಳನ್ನು ಪೂರ್ಣ ಸಂಯಮಿಸುವ ಸಾಮರ್ಥ್ಯವು ಮನುಷ್ಯನಿಗೆ ಬಂದಾಗಲೆ ಅವನು ನಿಜವಾದ ಸಮ್ರಾಟನಾಗಲು ಯೋಗ್ಯನಾಗುವನು ಮತ್ತು ಚಿರಶಾಂತಿಯನ್ನು ಪಡೆಯುವನು, ಎಂದು ನಾನು ಮನಗಂಡಿರುವೆನು. ಉಪನಿಷತ್ತು ಈ ಜ್ಞಾನವನ್ನು ಕೊಡುವದು ಮತ್ತು ಇದನ್ನು ಸಾಕ್ಷಾತ್ಕರಿಸುವ ಸಾಧನಮಾರ್ಗದ ದಿಗ್ದರ್ಶನವನ್ನು ಮಾಡುವದು. ವ್ಯವಹಾರದಲ್ಲಿ ಕೂಡ, ತಾನು ಯಾರು,

ತನ್ನ ಶಕ್ತಿ ಎಷ್ಟು, ತನ್ನ ಯೋಗ್ಯತೆ ಏನು, ತನ್ನ ಬಲವುಗಳಾವು, ದೋಷಗಳಾವು ಇದನ್ನೆಲ್ಲರಿತವನೆ ಹಾಗೂ ತನ್ನ ನಡೆ ನುಡಿ, ಆಚಾರ ವಿಚಾರ, ಇವುಗಳ ಮೇಲೆ ಯೋಗ್ಯ ಸಂಯಮನವಿದ್ದವನೆ ಯಶಸ್ವಿಯೂ ಸುಖಿಯೂ ಆಗುವನು. ಇದೇ ಮಾತು ಆಧ್ಯಾತ್ಮಿಕ ಶಾಂತಿಯ ವಿಷಯದಲ್ಲಿಯೂ ಸತ್ಯವಿರುವದು. 'ನಾನು' ಎಂಬುದು ಅನಾದಿ ಅನಂತ ಚೈತನ್ಯಸಾಗರದಲ್ಲಿಯ ಒಂದು ಹನಿಯು, ಚಿತ್ಸೂರ್ಯನ ಒಂದು ಕಿರಣವು. ಆ ಮೂಲ ಚೈತನ್ಯವೆ ಸರ್ವಕರ್ತೃವು, ಸರ್ವಭರ್ತೃವು; ಆ ಆದಿಶಕ್ತಿಯ ಅಬಾಧಿತ ನಿಯಮಗಳಿಂದ ಈ ವಿಶ್ವವು ಬದ್ಧವು ಮತ್ತು ನಿಯಮಿತವು. ಈ ಮಾತನ್ನರಿತುಕೊಂಡು ಆ ಸರ್ವಾತ್ಮನಲ್ಲಿ ಸರ್ವಸ್ವವನ್ನರ್ಪಿಸಿ ಅಕಾಮನೂ ಆತ್ಮಕಾಮನೂ ಆಗಿ ವರ್ತಿಸಿದರೆ ಮನುಷ್ಯನು ದ್ವಂದ್ವಾತೀತನೂ ಪರಮಸುಖಿಯೂ ಆಗುವನೆಂದು ಉಪನಿಷತ್ಕಾರರು ತಮ್ಮ ಅನುಭವವನ್ನು ಹೇಳಿರುವರು. ಆ ಅನುಭವವನ್ನು ಸುಲಭ ಮತ್ತು ಆದಷ್ಟು ರಂಜಕ ಭಾಷೆಯಲ್ಲಿ ವ್ಯಕ್ತಪಡಿಸಲು ನಾನು ಯತ್ನಿಸಿದ್ದೇನೆ. ಇದನ್ನು ಓದಿ ಆತ್ಮಜ್ಞಾನದ ಹಸಿವು ಹುಟ್ಟಿ ಓದುಗರು ಆತ್ಮನಿರೀಕ್ಷಣೆ, ಆತ್ಮಚಿಂತನ, ಆತ್ಮಸಂಯಮನ ಇವುಗಳ ಮಹತ್ವವನ್ನು ಅರಿತುಕೊಂಡರೆ ನಾನು ಧನ್ಯನು. ಒಮ್ಮೆ ಈ ವಿಷಯದ ಮಹತ್ವವು ಮನುಷ್ಯನ ಮನಸಿನಲ್ಲಿ ಮನೆಮಾಡಿತೆಂದರೆ ಮುಂದೆ ಅವನು ಪ್ರಗತಿಹೊಂದುತ್ತಲೆ ಹೋಗುವನೆಂಬುದು ನಿಶ್ಚಯ.

ಎಲ್ಲರೂ ಈ ಸೂಕ್ಷ್ಮಮಾರ್ಗವನ್ನರಿತು ಧನ್ಯರಾಗಲೆಂದು ನಾನು ಸರ್ವಾತ್ಮನನ್ನು ಪ್ರಾರ್ಥಿಸುವೆನು ಮತ್ತು ಈ ಚಿಕ್ಕ ಕೃತಿಯನ್ನು ಕನ್ನಡಿಗರೆದುರಿಗೆ ಇಡುವೆನು.

ಹುಬ್ಬಳ್ಳಿ
೧೯೪೩ ಮಾರ್ಚ, ೩

ರಂಗನಾಥ ದಿವಾಕರ

# ಉಪನಿಷತ್ತುಗಳನ್ನು ಕುರಿತು

ಇಲ್ಲಿ ಉಪನಿಷತ್ತುಗಳನ್ನು ಕುರಿತು ಹಲವು ಮುಖ್ಯವಾದ ಸಂಗತಿಗಳನ್ನು ಹೇಳುವದು ಅವಶ್ಯವಿರುವದು. ಈಗ ಉಪನಿಷತ್ತುಗಳು ಸ್ವತಂತ್ರ ಗ್ರಂಥ ರೂಪದಿಂದ ನಮ್ಮ ಕಣ್ಣೆದುರು ಇದ್ದರೂ ಅವು ವೇದಗಳ ಭಾಗಗಳು, ವೇದಗಳ ಅಂತ್ಯ ಭಾಗಗಳು. ವೇದಗಳ ಯಾವ ಅಂತ್ಯಭಾಗಗಳಲ್ಲಿ ತತ್ವ ಜ್ಞಾನವು ಹೇಳಲ್ಪಟ್ಟಿದೆಯೊ ಅವೆ ಉಪನಿಷತ್ತುಗಳು ಎನಿಸುವವು. ಆದುದ ರಿಂದಲೆ ಯಾವವೆ ತತ್ವಜ್ಞಾನಕ್ಕೆ 'ವೇದಾಂತ' (ವೇದದ ಅಂತ್ಯದಲ್ಲಿ ಹೇಳಲಾಗಿರುವದರಿಂದ) ಎಂಬ ಪರ್ಯಾಯಶಬ್ದವು ನಮ್ಮ ಭಾಷೆಯಲ್ಲಿ ರೂಢವಾಗಿದೆ.

ವೇದಗಳೆ ಆರ್ಯರ ಆದಿಮ, ಮೊಟ್ಟಮೊದಲಿನ ಗ್ರಂಥಗಳು, ಅತ್ಯಂತ ಪ್ರಾಚೀನವೆನಿಸುವ ಅಕ್ಷರಸಂಕೇತ ಅಥವಾ ಲಿಪಿ ಹುಟ್ಟದ ಪೂರ್ವದಲ್ಲಿ ರಚಿತ ವಾದವುಗಳು. ಲಿಪಿಯೇ ಹುಟ್ಟದಿರುವಾಗ ಲೇಖನವೆಲ್ಲಿಂದ ಬರಬೇಕು? ಆದುದರಿಂದ ಆಗ ವೇದಗಳು ಪೀಳಿಗೆಯಿಂದ ಪೀಳಿಗೆಗೆ, ಬಾಯಿಂದ ಬಾಯಿಗೆ ಶತಕಾನುಶತಕಗಳ ವರೆಗೆ ಕೇಳಿಕೆಯಿಂದಲೆ ಸಂರಕ್ಷಿಸಲ್ಪಟ್ಟವು. ಆದುದರಿಂದ ಸ್ವರಾಭ್ಯಾಸಕ್ಕೆ ಮತ್ತು ಇದ್ದಕ್ಕಿದ್ದ ಹಾಗೆ ವೇದಗಳನ್ನು ಅನ್ನುವದಕ್ಕೆ ಅತ್ಯಂತ ಮಹತ್ವವು ಕೊಡಲಾಯಿತು, ಹಾಗೂ ಅದೊಂದು ಪ್ರತ್ಯೇಕ ವಿದ್ಯೆಯೆ—ಶಿಕ್ಷಾ—ಎನಿಸಿತು. ಈಗ್ಯೂ ವೇದಪಠನ—ಸರಿಯಾಗಿ ವೇದವನ್ನು ಅನ್ನು ವದು—ಒಂದು ಶಾಸ್ತ್ರವೆನಿಸುವದು. ವೇದಗಳಿಗೆ ಶ್ರುತಿ (ಶ್ರುತ ಅಂದರೆ ಕೇಳಿದ್ದು) ಎಂಬ ಪರ್ಯಾಯಶಬ್ದವೂ ಪ್ರಚಲಿತವಿರುವದು.

ವೇದಗಳು ಮುಂದೆ ಆರ್ಯರ ಸರ್ವಮಾನ್ಯ ಹಾಗೂ ಪ್ರಮಾಣಗ್ರಂಥ ಗಳಾದವು. ಹಿಂದೂ ಧರ್ಮಕ್ಕೆ ಅವೇ ಈಗ ತಳಹದಿ ಎನಿಸುವವು. ಆದುದ ರಿಂದ ಅವುಗಳನ್ನು ಕುರಿತು ಅನೇಕ ಭಾಷ್ಯ ಟೀಕೆ ಮುಂತಾದವುಗಳು ಬರೆಯ ಲ್ಪಟ್ಟವು. ಹಳೆಯ ಭಾಷ್ಯಗಳಲ್ಲಿ ಶ್ರೀ ವಿದ್ಯಾರಣ್ಯರ ಬಂಧುಗಳಾದ ಸಾಯಣಾಚಾರ್ಯರ ಭಾಷ್ಯವೊಂದೆ ಈಗ ಉಪಲಬ್ಧವಿರುವದು. ಅವರು

ವೇದದ ವ್ಯಾಖ್ಯೆಯನ್ನು ಮಾಡುವಾಗ ಹೀಗೆ ಅಂದಿರುವರು:

ಇಷ್ಟಪ್ರಾಪ್ತ್ಯನಿಷ್ಟಪರಿಹಾರಯೋರಲೌಕಿಕ-
ಮುಪಾಯಂ ಯೋ ಗ್ರಂಥೋ ವೇದಯತಿ ಸ ವೇದಃ

ಇಷ್ಟವಾದುದನ್ನು ದೊರಕಿಸಲು ಅನಿಷ್ಟವಾದುದನ್ನು ಪರಿಹರಿಸಲು ಅಲೌಕಿಕವಾದ ಉಪಾಯಗಳನ್ನು ತಿಳಿಹೇಳುವ ಗ್ರಂಥವೆ ವೇದ ಎಂದು ಈ ವ್ಯಾಖ್ಯೆಯ ತಾತ್ಪರ್ಯವಿರುವದು. ಇದು ವೇದದ ಅತಿ ಪ್ರಾಚೀನ ವ್ಯಾಖ್ಯೆಯಾಯಿತು. ಈಚೆಗೆ ಆರ್ಯಧರ್ಮಧ್ವಜವನ್ನು ತ್ರಿಖಂಡದಲ್ಲಿ ಎತ್ತಿ ಮೆರೆಯಿಸಿದ ಶ್ರೀ ಸ್ವಾಮಿ ವಿವೇಕಾನಂದರು ವೇದನೆಂದರೆ ಬರಿ ವಿಶಿಷ್ಟಗ್ರಂಥಗಳಲ್ಲ, ವೇದವೆಂದರೆ ಜ್ಞಾನ, ಯಾವುದು ತಿಳಿಹೇಳುವದೊ ಅದೆಲ್ಲ ವೇದ ಎಂದು ಲಾಕ್ಷಣಿಕವಾಗಿ ಹೇಳಿರುವರು ಹಾಗೂ ವೇದಗಳು ಅನಾದಿ ಮತ್ತು ಅನಂತವಿರುವವು ಎಂಬ ಮಾತನ್ನು ಸಮರ್ಥಿಸಿರುವರು.

ವೇದಗಳು ನಾಲ್ಕು. ಚತುರ್ವೇದಗಳು ಎನ್ನುವದನ್ನು ಎಲ್ಲರೂ ಕೇಳಿರುವರು. ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ ಇವು ಅವುಗಳ ಹೆಸರುಗಳು. ಇವೆಲ್ಲ ಒಂದೇ ಕಾಲದಲ್ಲಿ ಆದವುಗಳಲ್ಲ. ಋಗ್ವೇದವು ಎಲ್ಲಕ್ಕೂ ಪ್ರಾಚೀನವಾದುದು ಎಂಬುದನ್ನು ಎಲ್ಲರೂ ಒಪ್ಪುವರು. ಇಡೀ ಋಗ್ವೇದ ಕೂಡ ಒಮ್ಮೆಲೆ ಆದ ಗ್ರಂಥವಲ್ಲ, ಒಬ್ಬನೇ ರಚಿಸಿದುದೂ ಅಲ್ಲ. ಅನೇಕ ಋಷಿಗಳು ಬೇರೆ ಬೇರೆ ಕಾಲಕ್ಕೆ ತಮಗೆ ಸ್ಫೂರ್ತಿಯುಂಟಾದಾಗ ರಚಿಸಿದ ಕಾವ್ಯಗಳ ಸಮೂಹವೆ ಈಗ ಋಗ್ವೇದ ಎನಿಸುವದು, ಋಗ್ವೇದ ಮಂತ್ರಗಳಲ್ಲಿಯೂ ಅತ್ಯಂತ ಪ್ರಾಚೀನವು ಆವುದು ಎಂಬ ಬಗ್ಗೆ ಇನ್ನೂ ವಿದ್ವಾಂಸರಲ್ಲಿ ಮತಭೇದವಿದೆ. ಮೊಟ್ಟಮೊದಲನೆ ಮಂತ್ರವು ಹತ್ತುಸಾವಿರ ವರುಷಗಳಾಚೆಗಿನದು ಎಂದು ಹಲವರು, ಅಷ್ಟು ಪ್ರಾಚೀನವಲ್ಲ ಎಂದು ಹಲವರು. ಆದರೂ ಋಗ್ವೇದದ ಆದಿಮಭಾಗವು ಮೂರುಸಾವಿರ ವರುಷಗಳಾಚೆಗಿನದು ಎಂದು ಸಾಮಾನ್ಯತಃ ಎಲ್ಲರೂ ಒಪ್ಪುವರು! ಇದರ ಮೇಲಿಂದ ಒಟ್ಟಿಗೆ ಈ ಗ್ರಂಥಗಳ ಪ್ರಾಚೀನತೆಯ ಕಲ್ಪನೆ ಬರಬಹುದು. ಆಯಾ ವೇದಗಳ ವಿಷಯಗಳನ್ನು ಇಲ್ಲಿ ವಿವರವಾಗಿ ಹೇಳುತ್ತ ಕೂಡುವದು ಸಾಧ್ಯವಿಲ್ಲ. ಆದರೆ ಸ್ಥೂಲಮಾನದಿಂದ ಋಗ್ವೇದದಲ್ಲಿ ದೇವದೇವತೆಗಳ ಸ್ತೋತ್ರಾದಿಗಳು ವಿಶೇಷ ಇರುವವು. ತತ್ವಜ್ಞಾನದ ದೃಷ್ಟಿಯಿಂದ ಋಗ್ವೇದದಲ್ಲಿಯ ನಾಸದೀಯಸೂಕ್ತವು ಅತ್ಯಂತ ಮಹತ್ವದ್ದು ಹಾಗೂ ಪ್ರಾಚೀನತಮವು.

ಯಜುರ್ವೇದವು ಮುಖ್ಯವಾಗಿ ಯಜ್ಞಯಾಗಾದಿ ಕರ್ಮಗಳ ಸಂಬಂಧದ ಮಂತ್ರಗಳಿಂದ ತುಂಬಿರುವದು. ಸಾಮವೇದದಲ್ಲಿ ದೇವತೆಗಳ ಪ್ರಾರ್ಥನೆ ಮುಂತಾದವು ಇರುವವು. ಮುಖ್ಯವಾಗಿ ಸಂಗೀತಶಾಸ್ತ್ರಕ್ಕನುಸರಿಸಿ ಆಯಾ ಮಂತ್ರಗಳನ್ನು ಹೇಗೆ ಅನ್ನಬೇಕು ಎಂಬುದು ಸಾಮವೇದದಲ್ಲಿದೆ. ಅಥರ್ವ ವೇದವು ಮಂತ್ರತಂತ್ರ, ಪ್ರಾಯಶ್ಚಿತ್ತಾದಿಗಳು, ಅಭಿಚಾರ, ಆರೋಗ್ಯಶಾಸ್ತ್ರ ಇತ್ಯಾದಿಗಳಿಂದ ಕೂಡಿದೆ.

ಆಯಾ ವೇದಗಳಲ್ಲಿ ಮುಖ್ಯವಾಗಿ ಮೂರು ಭಾಗಗಳನ್ನು ಮಾಡ ಬಹುದು. (೧) ಸಂಹಿತಾ—ಸ್ತೋತ್ರ, ಮಂತ್ರ, ಪ್ರಾರ್ಥನೆ ಮತ್ತು ಸೂಕ್ತ ಗಳು. (೨) ಬ್ರಾಹ್ಮಣ—ಗದ್ಯಭಾಗಗಳು, ಇವುಗಳಲ್ಲಿ ಯಜ್ಞವಿಚಾರ, ದೇವತೆಗಳ ಕಥೆಗಳು, ಯಜ್ಞಗಳ ವ್ಯವಹಾರಿಕ, ಆಧ್ಯಾತ್ಮಿಕ ಮಹತ್ವ ಇತ್ಯಾದಿಗಳು. (೩) ಆರಣ್ಯಕ—ಅರಣ್ಯದಲ್ಲಿ ಕುಳಿತು ಜ್ಞಾನಚರ್ಚೆ ನಡೆವಾಗ ಹೇಳಲಾದ ಕೇಳಲಾದ ತತ್ವವಿಷಯಕ ಮಾತುಗಳು. ಉಪನಿಷತ್ತು ಗಳು ಈ ಮೂರನೆ ಭಾಗದಲ್ಲಿ ಸೇರುವವು. ತಾತ್ವಿಕ ವಿಷಯವೆ ಉಪನಿಷತ್ತು ಗಳಲ್ಲಿ ಮುಖ್ಯವಾಗಿ ಪ್ರತಿಪಾದಿತವಾದುದು. ಆರಣ್ಯಕ ಮತ್ತು ಉಪನಿಷತ್ತು ಗಳು ಇವುಗಳಲ್ಲಿ ವಿಷಯಗಳ ದೃಷ್ಟಿಯಿಂದ ವಿಶೇಷ ಭೇದವಿಲ್ಲ. ಆರಣ್ಯಕ ಅಂದರೆ ಜನರು ವಾನಪ್ರಸ್ಥಾಶ್ರಮವನ್ನು ಕೈಕೊಂಡು ಅರಣ್ಯದಲ್ಲಿರುವಾಗ ಓದುವ ಗ್ರಂಥಗಳು ಎಂದು ಹಲವರು ಹೇಳುವರು. ಆರುಣೇಯ ಉಪನಿಷತ್ತು, ಶ್ರೀ ರಾಮಾನುಜಾಚಾರ್ಯರು ಮತ್ತು ಓಲ್ಡೆನ್‌ಬರ್ಗ ಇವರ ಮತವು ಸಾಧಾರಣ ಹೀಗೆಯೆ ಇದೆ. ಉಪನಿಷತ್ತುಗಳಲ್ಲಿ ತತ್ವವಿಷಯವು ಆರಣ್ಯಕ ಗಳಿಗಿಂತ ಹೆಚ್ಚು ಪ್ರಮಾಣದಲ್ಲಿರುವದು, ಆರಣ್ಯಕಗಳಲ್ಲಿ ಕಥಾಭಾಗವು ಹೆಚ್ಚು ಇರುವದು. ಹಲವು ಉಪನಿಷತ್ತುಗಳು ಯಾವದೊಂದು ಆರಣ್ಯಕ ಗಳ ಭಾಗಗಳಿರುವವು. ಉದಾ: ಐತರೇಯ ಉಪನಿಷತ್ತು ಋಗ್ವೇದದಲ್ಲಿಯ ಐತರೇಯ ಬ್ರಾಹ್ಮಣದಲ್ಲಿಯ ಐತರೇಯ ಆರಣ್ಯಕದಲ್ಲಿರುವದು. ತೈತ್ತಿ-ರೀಯವು ಕೃಷ್ಣಯಜುರ್ವೇದದಲ್ಲಿ ತೈತ್ತಿರೀಯ ಬ್ರಾಹ್ಮಣದಲ್ಲಿಯ ತೈತ್ತಿ-ರೀಯ ಆರಣ್ಯಕದ ಭಾಗವು.

ಉಪನಿಷತ್ತುಗಳು ಎಷ್ಟು ಎಂಬದೊಂದು ದೊಡ್ಡ ಪ್ರಶ್ನೆ. ಈಗ ೧೦೮ ಇಲ್ಲವೆ ೧೫೦ ಇರುವವೆಂದು ಹೇಳಲಾಗುತ್ತದೆ. ಮುಕ್ತಿಕ ಉಪನಿಷತ್ತಿ ನಲ್ಲಿ ೧೦೮ ಉಪನಿಷತ್ತುಗಳ ಹೆಸರುಗಳು ಕ್ರಮದಿಂದ ಕೊಡಲಾಗಿದುವವು.

೧೬೫೭ ರಲ್ಲಿ ಫಾರಸೀ ಭಾಷೆಯಲ್ಲಿ ಹಲವುಗಳ ಭಾಷಾಂತರವಾದುದು ೫೦ ಉಪನಿಷತ್ತುಗಳ ಒಂದು ಸಂಗ್ರಹದಿಂದ. ಆದು ಏನೇ ಇರಲಿ. ಈಗ ಉಪಲಬ್ಧವಿರುವ ಅನೇಕ ಉಪನಿಷತ್ತುಗಳಲ್ಲಿ ದಶೋಪನಿಷತ್ತುಗಳೆ ಮುಖ್ಯವಾದವುಗಳು. ಪ್ರಸ್ಥಾನತ್ರಯಿಯಲ್ಲಿ ಉಪನಿಷತ್ತುಗಳು ( ಹತ್ತು ಉಪನಿಷತ್ತುಗಳು ), ಬ್ರಹ್ಮಸೂತ್ರಗಳು ಮತ್ತು ಭಗವದ್ಗೀತೆ ಇವೆ ಗಣ್ಯವಾಗಿವೆ. ಅವುಗಳಲ್ಲಿ ಆಯಾ ಉಪನಿಷತ್ತುಗಳು ಯಾವ ವೇದಭಾಗದಲ್ಲಿವೆ ಎಂಬುದನ್ನು ಕೆಳಗೆ ಕೊಟ್ಟಿದ್ದೇನೆ.

| ಉಪನಿಷತ್ತು | ವೇದ | ಉಪನಿಷತ್ತು | ವೇದ |
|---|---|---|---|
| ಈಶ | ಕೃಷ್ಣಯಜುರ್ವೇದ | ಪ್ರಶ್ನ | ಅಥರ್ವವೇದ |
| ಕೇನ | ಸಾಮವೇದ | ಐತರೇಯ | ಋಗ್ವೇದ |
| ಕಠ | ಕೃಷ್ಣಯಜುರ್ವೇದ | ತೈತ್ತಿರೀಯ | ಕೃಷ್ಣಯಜುರ್ವೇದ |
| ಮುಂಡಕ | ಅಥರ್ವವೇದ | ಛಾಂದೋಗ್ಯ | ಸಾಮವೇದ |
| ಮಾಂಡೂಕ್ಯ | ಅಥರ್ವವೇದ | ಬೃಹದಾರಣ್ಯಕ | ಶುಕ್ಲಯಜುರ್ವೇದ |

ಉಪನಿಷತ್ತುಗಳು ಸಾಮಾನ್ಯತಃ ವೇದಾಭ್ಯಾಸದ ಕೊನೆಗೆ ಕಲಿಸಲಾಗುತ್ತಿದ್ದವು. ಅವು ವೇದಗಳ ಅಂತ್ಯಭಾಗಗಳೂ ಸೈ, ಡಾಯ್‌ಸನ್ ಇವರು ಹೇಳುವಂತೆ ವೇದಗಳ ಧ್ಯೇಯವನ್ನು ಹೇಳುವ ಗ್ರಂಥಗಳೂ ಸೈ. ಉಪ-ನಿಷತ್ತು ಶಬ್ದದ ಉತ್ಪತ್ತಿಯು ಉಪ-ನಿ-ಷತ್ ( ಸದ್ ) ಅಂದರೆ ಹತ್ತರ ಕುಳಿತು ಕೇಳಿಕೊಳ್ಳುವಂತಹದು, ಗುರುಗಳ ಸಮೀಪ ಕುಳಿತು ಕಲಿಯುವಂತಹದು, ರಹಸ್ಯವಿದ್ಯೆ, ಗುಪ್ತವಿದ್ಯೆ ಎಂದು ಇರುವದು. 'ಇತಿ ರಹಸ್ಯಮ್' 'ಇತಿ ಉಪನಿಷತ್' ಎಂಬ ಪ್ರಯೋಗಗಳು ಉಪನಿಷತ್ತುಗಳಲ್ಲಿರುವವು. ಡಾಯ್‌ಸನ್ ಇವನು ಉಪನಿಷತ್ತು ಎಂಬುದಕ್ಕೆ ಗೂಢ ಅರ್ಥ, ಗೂಢ ಶಬ್ದ, ಗೂಢ ವಿಷಯ ಎಂಬರ್ಥಗಳನ್ನು ಕಲ್ಪಿಸಿರುವನು. ತಾತ್ಪರ್ಯವೇನಂದರೆ ಉಪನಿಷತ್ತು ಎಂಬುದು ಕೇವಲ ಪುಸ್ತಕೀವಿದ್ಯೆಯಲ್ಲ; ಅದೊಂದು ಅನುಭವವಿದ್ಯೆ, ಗುರುಗಳಿಂದ ರಹಸ್ಯವಾಗಿ ತಿಳಿದುಕೊಂಡು ಸ್ವತಃ ಅನುಭವದಿಂದ ಪಡೆಯತಕ್ಕ ವಿದ್ಯೆ ಎಂದರೆ ತಪ್ಪಾಗಲಿಕ್ಕಿಲ್ಲ. ಮುಂದೆ ಕಾಲಕ್ರಮದಲ್ಲಿ ಹಿಂದುಸ್ಥಾನದಲ್ಲಿ ವಿಕಾಸಹೊಂದಿದ ಅನೇಕ ದರ್ಶನಗಳಿಗೆ ಉಪನಿಷತ್ತುಗಳೇ ತಾಯಿ. ಈ ದೃಷ್ಟಿಯಿಂದ ಉಪನಿಷತ್ತುಗಳು ಬಹಳ ಮಹತ್ವದ ಗ್ರಂಥಗಳು.

# ಪರಿವಿಡಿ

# ಉಪನಿಷತ್ ಕಥಾವಳಿ

## ೧. ಜ್ಞಾನಿಯಾದ ರೈಕ್ವ

ಬಹಳ ಪ್ರಾಚೀನಕಾಲದಲ್ಲಿ ಈ ಭರತವರ್ಷದಲ್ಲಿ ಜಾನುಶ್ರುತಿ ಪೌತ್ರಾಯಣನೆಂಬ ಓರ್ವ ಅರಸನಿದ್ದನು. ಅವನು ಮಹಾವೃಷದೇಶವನ್ನು ಒಳ್ಳೆ ನ್ಯಾಯಬುದ್ಧಿಯಿಂದ ಆಳಿ ಅಲ್ಲಿಯ ಪ್ರಜೆಗಳನ್ನು ಸುಖಸಮಾಧಾನದಲ್ಲಿಟ್ಟಿದ್ದನು. ದಾನಧರ್ಮಾದಿ ಕರ್ಮಗಳಲ್ಲಿ ಅವನು ಒಳ್ಳೆ ವಿಶ್ವಾಸವುಳ್ಳವನು. ಅದರಂತಹ ಇನ್ನೊಂದು ಶ್ರೇಷ್ಠ ಪುಣ್ಯಮಾರ್ಗವಿಲ್ಲ ಎಂದು ಅವನ ನಂಬಿಗೆ. ಅವನು ಹೇರಳ ಧನವನ್ನು ದಾನಮಾಡುತಿದ್ದನು. ಅನೇಕ ಅನ್ನಸತ್ರಗಳನ್ನು ನಡೆಸಿದ್ದನು, ಅಲ್ಲಲ್ಲಿ ಧರ್ಮಶಾಲೆಗಳನ್ನು ಕಟ್ಟಿಸಿದ್ದನು. ಆದುದರಿಂದ ಅವನ ಕೀರ್ತಿ ದಶದಿಕ್ಕುಗಳಿಗೆ ಹಬ್ಬಿತ್ತು.

ನಿತ್ಯದ ಎಲ್ಲ ಕೆಲಸಗಳನ್ನು ತೀರಿಸಿ ಅವನು ಒಂದು ದಿನ ರಾತ್ರಿ ತನ್ನ ಅರಮನೆಯ ಮೇಲಟ್ಟದ ಮಾಳಿಗೆಯ ಮೇಲೆ ನಿರಭ್ರ ನಭೋಮಂಡಲದಲ್ಲಿಯ ನಕ್ಷತ್ರಗಳ ನೋಟವನ್ನು ನೋಡುತ್ತ ಕುಳಿತಿದ್ದನು. ಅವನು ಮಾಡಿದ ಮತ್ತು ಮಾಡುತಿರುವ ಪುಣ್ಯಕರ್ಮಗಳ ಮೂಲಕ ಅವನ ಮುಖದ ಮೇಲೆ ಒಂದು ಬಗೆಯ ಕೃತಾರ್ಥಭಾವವು ಕಂಗೊಳಿಸುತಿತ್ತು. ಹೀಗೆ ಕುಳಿತಿರುವಷ್ಟರಲ್ಲಿ ಚಕ್ರವಾಕಪಕ್ಷಿಗಳ ಒಂದು ಜೋಡು ಆಕಾಶದಲ್ಲಿ ಹಾರಾಡುವದನ್ನು ಅವನು ಕಂಡನು. ಆ ಪಕ್ಷಿಗಳು ತಮ್ಮತಮ್ಮೊಳಗೆ ಏನೋ ಮಾತಾಡುತಿದ್ದವು. ಆ ಸಂವಾದವನ್ನು ಅವನು ಕಿವಿಗೊಟ್ಟು ಕೇಳತೊಡಗಿದನು.

ಆ ಹಕ್ಕಿಗಳಲ್ಲಿ ಒಂದು ಇನ್ನೊಂದಕ್ಕೆ ಅಂದದ್ದು, 'ಭಲ್ಲಾಕ್ಷನೇ, ಕುರುಡನಂತೆ ಹೀಗೇಕೆ ನಡೆದಿರುವಿ? ಅಕೋ, ಕಾಣುವುದಿಲ್ಲವೆ ಜಾನುಶ್ರುತಿರಾಜನ ಕೀರ್ತಿಜ್ಯೋತಿಯು? ಅದು ಭೂಲೋಕದಿಂದ ಸ್ವರ್ಗಲೋಕದವರೆಗೆ ಪಸರಿಸಿದೆ. ಅದು ನಿನಗೆ ತಗಲಿದರೆ ನೀನು ಸುಟ್ಟುಹೋಗುವಿ, ಕಂಡೆಯಾ? ಅಷ್ಟು ಅದು ಪ್ರಖರವಿರುವದು. ಎಚ್ಚರದಿಂದ ಸಾಗು.' ಇದಕ್ಕೆ ಉತ್ತರ

ವೆಂದು ಜೊತೆಯ ಪಕ್ಷಿಯು, 'ಹುಚ್ಚಾ, ನನ್ನನ್ನು ಹೀಗೇಕೆ ಬೆದರಿಸುತ್ತೀ? ಈ ಅರಸನೇನು ರೈಕ್ವನಷ್ಟು ಕೀರ್ತಿವಂತನೆ? ಈತನ ಬಡಿವಾರವನ್ನು ಇಷ್ಟೇಕೆ ಬೆಳೆಸುತ್ತೀ?' ಎಂದು ಕೇಳಿತು. ಆಗ ಮೊದಲನೆಯ ಹಕ್ಕಿಯು ಆಶ್ಚರ್ಯ ದಿಂದ, 'ಅವನಾವನು ರೈಕ್ವನೆಂಬವನು? ಅವನು ಈ ಜಾನುಶ್ರುತಿಗಿಂತ ಪುಣ್ಯವಂತನೆ?' ಎಂಬ ಪ್ರಶ್ನೆ ಮಾಡಿತು. ಈ ಪ್ರಶ್ನೆಯನ್ನು ಕೇಳಿ ಎರಡನೆಯ ಪಕ್ಷಿಯು ಅಂದದ್ದು, 'ಇದರಲ್ಲಿ ಸಂಶಯವುಂಟೇ ನಿನಗೆ? ತಪ್ಪಲ ಮೇಲೆ ಸುರಿಯುವ ಮಳೆನೀರೆಲ್ಲ ಹೊಳೆಗೆ ಹರಿದುಹೋಗುವಂತೆ ದಿಗ್ದೇಶಗಳಲ್ಲಿ ಜನರು ಮಾಡುವ ಪುಣ್ಯಕರ್ಮಗಳ ಫಲವೆಲ್ಲ ಅವನನ್ನೇ ಸೇರುವುದು. ಇಷ್ಟು ಅವನ ಮಹಾತ್ಮ್ಯವು. ಜಾನುಶ್ರುತಿಯು ಕೇವಲ ಕರ್ಮಿಯು, ಮೇಲಾಗಿ ಕಾಮ್ಯ-ಕರ್ಮಿಯು. ಕೀರ್ತಿಗೆ ಮರುಳಾಗಿ ಮಾಡುವವನು. ರೈಕ್ವನು ಜ್ಞಾನಿಯು, ಸ್ವಕರ್ಮನಿರತನು, ಹಾಗೂ ನಿಷ್ಕಾಮಿಯು.' ಹೀಗೆ ನುಡಿಯುತ್ತ ಆ ಪಕ್ಷಿಗಳು ದೂರ ಹಾರಿಹೋದವು.

ಅವುಗಳ ನಡುವೆ ನಡೆದ ಸಂಭಾಷಣವನ್ನು ಕೇಳಿ ಅರಸನು ಅಚ್ಚರಿಬಟ್ಟನು ಮತ್ತು ಸ್ವಲ್ಪ ಖಿನ್ನನಾದನು. ತನಗಿಂತ ಪುಣ್ಯಾತ್ಮನು ಯಾರು, ಆ ರೈಕ್ವನೆಂಬವನು ಎಲ್ಲಿರಬಹುದು, ಅವನು ತನಗೆ ಹೇಗೆ ಭೆಟ್ಟಿಯಾಗಬಹುದು, ಎಂಬ ಕುತೂಹಲವು ಅವನಲ್ಲಿ ಹುಟ್ಟಿತು. ಹಾಗೆಯೇ ಚಿಂತಿಸುತ್ತ ಒರಗಿರಲು ಅವನಿಗೆ ನಿದ್ದೆಹತ್ತಿತು. ಬಳಿಕ ಬೆಳಗಿನ ಜಾವದಲ್ಲಿ ಪ್ರತಿನಿತ್ಯದಂತೆ ಭಟ್ಟಂಗಿಗಳು ಅವನ ಸ್ತುತಿಸ್ತೋತ್ರಗಳಿಂದೊಡಗೂಡಿದ ರಾಗಗಳನ್ನು ಹಾಡತೊಡಗಿದರು. ಆ ಸಂಗೀತವು ದಿನದಂತೆ ಅವನಿಗೆ ರುಚಿಸಲಿಲ್ಲ. 'ಮಹಾದಾನಿಯೆ, ಶ್ರೇಷ್ಠಧರ್ಮಿಯೆ, ಉಪ್ಪವಡಿಸಬೇಕು, ಉಪ್ಪವಡಿಸಬೇಕು. ದೀನರು ದುರ್ಬಲರು ಹಾದೀಕಾಯುವರು. ಅವಧರಿಸಿ ಅನುಗ್ರಹಿಸಬೇಕು' ಎಂಬ ಮುಂತಾದ ಆಶಯವುಳ್ಳ ಗೀತಗಳು ಅವನಿಗೆ ಆ ಹೊತ್ತು ಕರ್ಕಶವೆನಿಸಿದವು. ಆ ಗಾಯಕರಲ್ಲಿ ಒಬ್ಬನನ್ನು ಕರೆದು ಅರಸನು ಅಂದದ್ದು, 'ನನ್ನ ವ್ಯರ್ಥ ಪ್ರಶಂಸೆಯನ್ನು ಏಕೆ ಮಾಡುವಿ? ಜ್ಞಾನಿ ರೈಕ್ವನು ನನಗಿಂತ ನೂರ್ಮಡಿ ಶ್ರೇಷ್ಠನು.' ಈ ಹೊಸ ತರದ ಮಾತು ಕೇಳಿ ಆ ವಂದಿಯು, 'ಸ್ವಾಮೀ, ಅವನಾರವನು ರೈಕ್ವನೆಂಬವನು? ತಮ್ಮ ಚಿತ್ತವು ಈ ದಿನ ಈ ಪರಿ ವ್ಯಾಕುಲವೇಕೆ?' ಎಂದು ಕೈಮುಗಿದು ಪ್ರಶ್ನೆ ಮಾಡಿದನು. ಆಗ ಗಲಿತಗರ್ವನಾದ ಆ ಪುಣ್ಯಶ್ರೇಷ್ಠನು, 'ಸಕಲ ಪ್ರಜೆಗಳು ಮಾಡುತಿರುವ ಪುಣ್ಯವೆಲ್ಲ

ತನ್ನೆಡೆಗೆ ಎಳಕೊಳ್ಳುವಷ್ಟು ಸಾಮರ್ಥ್ಯವುಳ್ಳವನವನು. ಅವನು ಕೇವಲ ಕರ್ಮಠನಲ್ಲವಂತೆ. ಅವನು ಜ್ಞಾನಯುಕ್ತ ನಿಷ್ಕಾಮಕರ್ಮಿಯಂತೆ. ಹುಡುಕ ಬಾರದೆ ಆ ಮಹಾಯೋಗ್ಯಪುರುಷನನ್ನು ?' ಎಂದು ಆ ವಂದಿಗೆ ಬೆಸಸಿದನು. ಈ ಆಜ್ಞೆಯನ್ನು ಕೇಳಿ ವಂದಿಯು ರೈಕ್ವನನ್ನು ಶೋಧಿಸಲಿಕ್ಕೆ ಹೊರಟನು.

ಕೆಲದಿನ ಅತ್ತಿತ್ತ ಹುಡುಕಾಡಿ ಆ ವಂದಿಯು ಮರಳಿ ಬಂದು ರೈಕ್ವನು ತನಗೆ ಸಿಕ್ಕಲಿಲ್ಲವೆಂದು ಅರಸನಿಗೆ ಹೇಳಿದನು. ಆಗ ಜಾನುಶ್ರುತಿಯು ಅವನಿಗೆ ಅಂದದ್ದು, 'ನೀನು ಅವನನ್ನು ಎಲ್ಲಿ ಹುಡುಕಾಡಿದಿಯೊ ಏನೊ ನಾನರಿಯೆ. ಬ್ರಹ್ಮಜ್ಞಾನಿಗಳು ಎಲ್ಲಿರುವರೊ ಅಂಥಲ್ಲಿ ಹೋಗಿ ಅವನನ್ನು ಹುಡುಕುವಂಥವನಾಗು.' ಆಗ ಆ ವಂದಿಯು ಪುನಃ ಮಹಾವೃಷದೇಶದ ಹಳ್ಳಿಗಳನ್ನು ಹುಡುಕಲಾರಂಭಿಸಿದನು. ಯಾವದೋ ಒಂದು ಹಳ್ಳಿಯಲ್ಲಿ ವಿಚಾರಿಸಲಾಗಿ, 'ಅಕೋ ಆ ಬಂಡಿಯ ನೆಳಲಿನಲ್ಲಿ ಕುಳಿತಿರುವವನೆ ರೈಕ್ವನು' ಎಂದು ಜನರು ಬೆರಳಿನಿಂದ ತೋರಿಸಿದರು. ಹತ್ತಿರ ಹೋಗಿ ನೋಡಲಾಗಿ, ಒಬ್ಬ ಶಾಂತ ಮುಖಮುದ್ರೆಯ ಪುರುಷನು ತನ್ನ ಗುಡಿಸಲಬದಿಗೆ ಇರುವ ಬಂಡಿಯ ಕೆಳಗೆ ಹುರುಕು ಕೆರೆಯುತ್ತ ಕುಳಿತಿದ್ದನು. ಅವನನ್ನು ನೋಡಿ ಆ ವಂದಿಯು ತನ್ನಷ್ಟಕ್ಕೆ ತಾನೆ, 'ತನಗಿಂತ ಈ ಕ್ಷುದ್ರನು ಸರಿಮಿಗಿಲೆಂದು ನಮ್ಮರಸನು ತಿಳಿದಿರುವನು! ಏನನ್ನಬೇಕು ನಮ್ಮೊಡೆಯನ ಹುಚ್ಚುತನಕ್ಕೆ!' ಎಂದು ಗೊಣಗುಟ್ಟಿದನು. ಆದರೆ ಉಪಾಯಗಾಣದೆ ಅರಸನ ಆಜ್ಞೆಯ ಮೇರೆಗೆ ರೈಕ್ವನಿದ್ದ ಸ್ಥಾನವನ್ನು ಅವನಿಗೆ ಹೋಗಿ ತಿಳುಹಿದನು.

ಜ್ಞಾನಿಯಾದ ಮತ್ತು ಸ್ವಕರ್ಮದಲ್ಲಿ ನಿರತನಾದ ಆ ರೈಕ್ವನ ಮಹತ್ವವು ಆ ಅರಸನಾಳಿಗೆ ತಿಳಿಯದೆ ಹೋಗಿದ್ದರೂ ಜಾನುಶ್ರುತಿಗೆ ಪೂರ್ಣ ತಿಳಿದಿತ್ತು. ರೈಕ್ವನು ಬಾಹ್ಯತಃ ಹುರುಕು ಕೆರೆಯುತ್ತ ಮುರುಕು ಬಂಡಿಯ ಕೆಳಗೆ ಕುಳಿತಿದ್ದರೂ ತನ್ನಾತ್ಮನನ್ನರಿತು ಶಾಂತನೂ ಆನಂದಿಯೂ ಆಗಿ ತನ್ನ ಪಾಲಿಗೆ ಬಂದ ಕಾಯಕವನ್ನು ಕೇವಲ ಲೀಲಾಭಾವದಿಂದ ಮಾಡುತಿರುವ ಯೋಗಿಯವನು, ಎಂಬುದು ಅರಸನಿಗೆ ಗೊತ್ತಾಗಿತ್ತು. ಅವನ ಸುದ್ದಿಯನ್ನು ಕೇಳಿದೊಡನೆ ೬೦೦ ಆಕಳು, ಚಿನ್ನದ ನಾಣ್ಯಗಳು ಮುಂತಾದ ಕಾಣಿಕೆಗೊಂಡು ಅರಸನು ರೈಕ್ವನಿದ್ದೆಡೆಗೆ ಹೋದನು. ಇವನು ತನ್ನೆಡೆಗೆ ಬ್ರಹ್ಮವಿದ್ಯೆಗಾಗಿ ಬಂದಿರುವನೆಂಬುದನ್ನು ರೈಕ್ವನು ಒಮ್ಮೆಲೆ ಗುರುತಿಸಿದನು. ಆದರೆ ಅರಸನ ಸತ್ವಪರೀಕ್ಷೆನಾಡುವ ಉದ್ದೇಶದಿಂದ ಅವನು ಜಾನುಶ್ರುತಿಗೆ ಅಂದದ್ದು,

'ಹೇ ರಾಜಾ, ಈ ಆಕಳು, ಈ ಚಿನ್ನದ ರಾಶಿ ಇವೆಲ್ಲವುಗಳನ್ನು ಯಾಕೆ ಕೊಂಡು ಬಂದಿರುವಿ ? ನಾನೇನು ವಿದ್ಯಾವಿಕ್ರಯ ಮಾಡುವವನೆಂದು ಬಗೆದು ಈ ಸಂಪತ್ತನ್ನು ನನಗಾಗಿ ತಂದೆಯಾ ? ಹೋಗತ್ತ, ಈ ಸಿರಿಸಂಪತ್ತಿಯಿಂದ ನನಗೇನು ? '

ಈ ತಿರಸ್ಕಾರವಾಣಿಯನ್ನು ಕೇಳಿ ಅರಸನಿಗೆ ವಿಷಾದವೆನಿಸಿತು. ಅವನ ನಿಃಸ್ಪೃಹವೃತ್ತಿಯನ್ನು ನೋಡಿ ವಿಸ್ಮಯವೂ ಆಯಿತು. ತಾನು ದೇಶದ ಅರಸು, ಅವನೊಬ್ಬ ದರಿದ್ರನು. ತಾನು ಅವನ ಮನೆಮುಟ್ಟ ಲಕ್ಷ್ಮಿಯನ್ನು ಒಯ್ದು ಕೊಟ್ಟರೂ ಅವನು ಧಿಕ್ಕರಿಸುವನಲ್ಲವೆ, ಎಂದು ಕ್ಷಣಹೊತ್ತು ಅವನು ಸಿಟ್ಟಾದನು. ಆದರೆ ಆ ಶಾಂತಮೂರ್ತಿಗೆ ಅವನೇನು ಮಾಡಬಲ್ಲನು ? ಸುಮ್ಮನೆ ತನ್ನ ರಾಜಧಾನಿಗೆ ಮರಳಿದನು.

ಅರಸನ ಜ್ಞಾನಜಿಜ್ಞಾಸೆಯು ದಿನದಿನಕ್ಕೆ ಬಲಿಯಿತು. ಅವನಿಗೆ ತನ್ನ ಅರಮನೆಯಲ್ಲಿ ಸೊಗಸಾಗಲೊಲ್ಲದು. ರೈಕ್ವನ ಗಂಭೀರ ಉಪದೇಶವು ಅನೇಕ ಸಂತಪ್ತ ಮನಗಳನ್ನು ತಣಿಸುವದು, ಎಂಬ ಸುದ್ದಿಯನ್ನು ಅವನು ಮೇಲಿಂದ ಮೇಲೆ ಕೇಳುತಿದ್ದನು. ಆದುದರಿಂದ ಪುನಃ ಒಮ್ಮೆ ರೈಕ್ವನಿದ್ದೆಡೆಗೆ ಹೋಗ ಬೇಕೆಂದು ನಿಶ್ಚಯಿಸಿದನು. ವಿನಮ್ರಭಾವದಿಂದ ಅವನ ಬಳಿಗೆ ಹೋಗಿ ನಮಸ್ಕಾರ ಮಾಡಿ, 'ಪರಮ ಜ್ಞಾನಿಯೇ, ನಿಃಸ್ಪೃಹ ಮಹಾತ್ಮನೇ, ಈಗಾದರೂ ಅನುಗ್ರಹಿಸು' ಎಂದು ಬೇಡಿಕೊಂಡನು. ಆಗ ಅರಸನ ನಿಷ್ಠೆಯನ್ನು ನೋಡಿ ಸಂತುಷ್ಟನಾಗಿ ರೈಕ್ವನು ಅವನಿಗೆ ಬ್ರಹ್ಮಜ್ಞಾನವನ್ನು ಹೇಳಿದನು. ಮನುಷ್ಯನಿಗೆ ಕಾಮ್ಯಕರ್ಮದಿಂದ ಶಾಂತಿಯು ದೊರೆಯದು, ಎಲ್ಲೆಲ್ಲಿಯೂ ವ್ಯಾಪ್ತವಾದ ಒಂದೇ ಒಂದು ಆತ್ಮನ ಅನುಭವದಿಂದ ಯುಕ್ತನಾಗಿ ನಿಃಸ್ಪೃಹ ವೃತ್ತಿಯಿಂದ, ತನ್ನ ಪಾಲಿಗೆ ಬಂದ ಕರ್ತವ್ಯವನ್ನು ಅನಾಸಕ್ತನಾಗಿ ಮಾಡುವದರಿಂದ ಸಮಾಧಾನವಾಗುವದು, ಎಂದು ರೈಕ್ವನು ಉಪದೇಶಿಸಿದನು. ಆ ಉಪದೇಶವು ಅರಸನ ಮನದಲ್ಲಿ ಚೆನ್ನಾಗಿ ನಟ್ಟಿತು. ಹದವಾದ ಭೂಮಿಯಲ್ಲಿ ಸಸಿಗಳು ಭರದಿಂದ ಬೆಳೆಯುವಂತೆ ಅವನ ಅಂತಃಕರಣದಲ್ಲಿ ರೈಕ್ವನ ಮಾತುಗಳು ಬೇರೂಟ್ಟವು. 'ತಾನೊಬ್ಬನು ಈ ಮಾನವೀಸಮಾಜದಲ್ಲಿ ಹುಟ್ಟಿ ಬೆಳೆದು, ದೊಡ್ಡ ಯೋಗ್ಯತೆಯನ್ನು ಪಡೆದವನು. ಅಂದಬಳಿಕ ಆ ಸಮಾಜವನ್ನು ಕುರಿತು ಎಲ್ಲ ಶಕ್ತಿಸಂಪತ್ತುಗಳನ್ನು ವೆಚ್ಚಮಾಡುವದು ತನ್ನ ಕರ್ತವ್ಯವೆ ಇರುವದು. ಆದಕಾಗಿ ತನಗೆ ಅಭಿಮಾನವೇಕೆ, ಕೀರ್ತಿಲೋಲುಪತೆಯೇಕೆ,

ಅಹಂಕಾರವೇಕೆ', ಎಂದು ಆವನಿಗೆ ಅಂದಿನಿಂದ ಎನಿಸಲಾರಂಭಿಸಿತು. ಬಳಿಕ ಅರಸನು ತನ್ನೊಡನೆ ತಂದ ಒಂದು ಸಾವಿರ ಆಕಳುಗಳನ್ನೂ ಚಿನ್ನವನ್ನೂ ಉಪವರಳಾದ ತನ್ನ ಮಗಳನ್ನೂ ರೈಕ್ವನಿಗೆ ಅರ್ಪಿಸಿ ಅವುಗಳನ್ನು ಸ್ವೀಕರಿಸಲು ಹೇಳಿಕೊಂಡನು. ಆಗ ಪ್ರೇಮಾದರಪೂರ್ವಕವಾಗಿ ಕೊಟ್ಟ ಕನಕ ಕಾಂತೆಯರನ್ನು ಸ್ವೀಕರಿಸಿ ರೈಕ್ವನು ಅರಸನಿಗೆ ಸಂತೋಷವನ್ನುಂಟು ಮಾಡಿದನು. ರೈಕ್ವನು ಇರುವ ಹಳ್ಳಿಯನ್ನೂ ಅರಸನು ಆವನಿಗೆ ದಾನಮಾಡಿ ಬಿಟ್ಟನು. ಅಂದಿನಿಂದ ಆ ಹಳ್ಳಿಗೆ ರೈಕ್ವಪರ್ಣ ಎಂಬ ಹೆಸರಾಯಿತು. ಮುಂದೆ ಜಾನುಶ್ರುತಿಯು ಯಥಾಪ್ರಕಾರವಾಗಿ ತನ್ನ ಕರ್ಮಗಳನ್ನು ನಡೆಸಿದನು. ಆದರೆ ಕೀರ್ತಿಲೋಲುಪತೆ, ಅಹಂಕಾರ ಇವುಗಳನ್ನು ಬಿಟ್ಟಿದ್ದರಿಂದ ಆವನಲ್ಲಿ ವಿಲಕ್ಷಣ ಶಾಂತಿಯು ನೆಲೆಗೊಂಡಿತು, ಮತ್ತು ಆವನು ಆಮರಣ ತನ್ನ ಕರ್ತವ್ಯವನ್ನು ಮಾಡುತಲಿದ್ದು ಧನ್ಯಭಾವವನ್ನು ಪಡೆದನು.

## ೨. ಸತ್ಯಕಾಮ ಜಾಬಾಲ

ಉಪನಿಷತ್ಕಾಲದಲ್ಲಿ ಸತ್ಯಕಾಮನೆಂಬ ಓರ್ವ ಚಿಕ್ಕ ಬಾಲಕನಿದ್ದನು. ಆಗ ಸಮಾಜದಲ್ಲಿ ಆತ್ಮಜ್ಞಾನಕ್ಕೆ ಅತ್ಯಂತ ಮಹತ್ವವಿತ್ತು. ಎಲ್ಲರೂ ಆ ಜ್ಞಾನವನ್ನು ದೊರಕಿಸಬೇಕೆಂದು ಹವಣಿಸುತ್ತಿದ್ದರು. ಆದುದರಿಂದ ತಾನೂ ಆತ್ಮಜ್ಞಾನಿಯಾಗಬೇಕೆಂಬ ಮಹತ್ವಾಕಾಂಕ್ಷೆಯು ಆ ಬಾಲಕನಲ್ಲಿ ಹುಟ್ಟಿತು. ಆಗ ಜಬಾಲಾ ಎಂಬ ತನ್ನ ತಾಯಿಯ ಬಳಿಗೆ ಹೋಗಿ, 'ಅವ್ವಾ, ನಾನು ಗುರುಗಳೆಡೆಗೆ ಹೋಗಿ ಬ್ರಹ್ಮಚರ್ಯದಿಂದಿದ್ದು ಜ್ಞಾನವನ್ನು ಸಂಪಾದಿಸಬೇಕೆನ್ನುವೆ. ಗುರುಗಳೆಡೆಗೆ ಹೋದೊಡನೆ ಅವರು ಮೊದಲು ಗೋತ್ರವನ್ನು ವಿಚಾರಿಸುವರು. ಆದುದರಿಂದ ನನ್ನ ಗೋತ್ರವನ್ನು ನನಗೆ ಹೇಳು' ಎಂದು ಆ ಸತ್ಯಕಾಮನು ಕೇಳಿಕೊಂಡನು. ತನ್ನ ಎಳೆ ಹಸು ಇಷ್ಟು ದೊಡ್ಡ ಕೆಲಸವನ್ನು ಕೈಕೊಳ್ಳ ಲಿಚ್ಛಿಸಿದುದನ್ನು ನೋಡಿ ತಾಯಿಗೆ ಒಳ್ಳೆ ಆನಂದವಾಯಿತು. ಇಂಥ ಮಗುವನ್ನು ನೋಡಿ ಯಾವ ತಾಯಿಯ ಅಂತಃಕರಣವು ಆನಂದಾಭಿಮಾನಗಳಿಂದ

ತುಂಬಿ ತುಳುಕಲಿಕ್ಕಿಲ್ಲ! ಆದರೆ ತನ್ನ ಮಗನು ತೀರ ಎಳೆ ಕೂಸು, ಅವನಿಂದ ಗುರುಗೃಹವಾಸ, ತಪ ಮುಂತಾದ ಕಾರ್ಯಗಳು ಆಗಲಿಕ್ಕಿಲ್ಲ, ಎಂದು ತಿಳಿದು ಆಕೆ ಅಂದದ್ದು, 'ಬಾಳಾ, ನೀನು ಇನ್ನೂ ಬಹಳ ಚಿಕ್ಕವನು. ಈ ಕಾರ್ಯವನ್ನು ಪೂರೈಸುವದು ಕಠಿಣ. ಹೋಗಲಿ, ಇನ್ನೂ ಹಲವು ವರ್ಷಗಳು ಹೋಗಲಿ.'

ತಾಯಿಯು ಈ ಮಾತು ಕೇಳಿ ಬಲು ಆತುರದಿಂದ ಸತ್ಯಕಾಮನು, 'ಗಿಡವು ಎಳೆಯದಿದ್ದಾಗ ಬಾಗದೆ ಮರವಾದ ಬಳಿಕ ಬಾಗುವುದೆ? ನಾನು ಈಗ ಚಿಕ್ಕವನಾದರೇನಾಯಿತು? ನನಗೆ ಇನ್ನೊಂದೇನೂ ಸೊಗಸದು. ನನಗೆ ಅಪ್ಪಣೆ ಕೊಡು. ವಿದ್ಯೆಯಿಂದಲೆ ನನಗೆ ಸಮಾಧಾನವು. ನನ್ನ ಗೋತ್ರವನ್ನು ಹೇಳು' ಎಂದು ಪುನಃ ಬೇಡಿಕೊಂಡನು.

ಮಗನು ತಾಯಿಗೆ ಮಾಡಿದ ಪ್ರಶ್ನೆಯಾದರೂ ಬಲು ಬಿಗಿಯಿತ್ತು. ಅದರ ಉತ್ತರವು ಆಕೆಗೆ ತೋಚದೆ ಹೋಯಿತು. ಕೊನೆಗೆ ಈ ಬಾಲನು ತನ್ನ ಹಟವನ್ನು ಬಿಡುವವನಲ್ಲವೆಂಬುದನ್ನರಿತು, ಸ್ತ್ರೀಸಹಜವಾದ ಲಜ್ಜೆಯನ್ನು ಒತ್ತಟ್ಟಿಗೆ ಇಟ್ಟು, 'ಮಗು, ನಿಜವಾಗಿ ನಿನ್ನ ಗೋತ್ರವನ್ನು ನಾನರಿಯೆ. ನಾನು ಮೊದಲಿನಿಂದ ಬಡವಿ. ಹರೆಯದವಳಿದ್ದಾಗ ಅಲ್ಲಲ್ಲಿ ಜನರ ಸೇವೆಯಲ್ಲಿ ತೊಡಗಿದಾಗ ನಿನ್ನನ್ನು ನಾನು ಹೆತ್ತಿರುವೆನು. ಆದುದರಿಂದ ನಿನ್ನ ತಂದೆ ಯಾರು, ಇದನ್ನು ನಿಶ್ಚಯದಿಂದ ಹೇಳಲರಿಯೆ. ಆದರೆ ನನ್ನ ಹೆಸರು ಜಬಾಲಾ ಮತ್ತು ನಿನ್ನ ಹೆಸರು ಸತ್ಯಕಾಮ, ಇದು ನಿಶ್ಚಯ. ಆದುದರಿಂದ ಗುರುಗಳು ಕೇಳಿದರೆ ನೀನು ಸತ್ಯಕಾಮ ಜಾಬಾಲನೆಂದು ಹೇಳು.' ಮುಚ್ಚು ಮರೆ ಇಲ್ಲದೆ ಇದ್ದ ಮಾತನ್ನು ಇದ್ದ ಹಾಗೆ ಹೇಳಿಬಿಟ್ಟಳು.

ಇದನ್ನು ಕೇಳಿಕೊಂಡು ಆ ಮುಗ್ಧಬಾಲಕನು ಹಾರಿದ್ರುಮತ ಗೌತಮ ನೆಂಬ ಗುರುವಿನ ಬಳಿಗೆ ಹೋದನು. 'ನಾನು ಬ್ರಹ್ಮಚಾರಿಯಾಗಿ ನಿಮ್ಮಲ್ಲಿರ ಲಿಚ್ಛಿಸುವೆ' ಎಂದು ನಮ್ರತೆಯಿಂದ ಪ್ರಣಾಮಪೂರ್ವಕವಾಗಿ ಹೇಳಿದನು. ಗೌತಮನು ಕಣ್ಣೆತ್ತಿ ಒಮ್ಮೆ ಈ ಸತ್ಯಕಾಮನ ಕಡೆಗೆ ನೋಡಿದನು. ಹೇಳಿ ಕೇಳಿ ಇವನು ದರಿದ್ರನು. ಆದರೆ ಇವನ ಎಳೆತನ, ಸರಳತೆ, ಸ್ವಾಭಾವಿಕವಾದ ಮುಗುಳುನಗೆ, ಆತುರತೆ ಇವೇ ಇವನ ಗುಣಗಳಾಗಿದ್ದವು. ತೇಜಸ್ವಿಯೂ ಕರುಣಾಮೂರ್ತಿಯೂ ಆದ ಆ ಮುನಿಯು ಈ ಕಂದನ ಸಾಹಸವನ್ನು ನೋಡಿ ಸ್ವಲ್ಪ ವಿಸ್ಮಿತನಾಗಿ 'ವತ್ಸಾ, ಸಂತೋಷವು. ನಿನ್ನ ಗೋತ್ರವಾವುದು?' ಎಂದು ಹೊಸ ಶಿಷ್ಯರನ್ನು ಕೇಳುವಂತೆ ಇವನನ್ನೂ ಕೇಳಿದನು.

'ಗುರುವರ್ಯರೇ, ತನ್ನ ಸೇವೆಗೆ ಬರುವಾಗ ಈ ಪ್ರಶ್ನೆಯನ್ನು ತಾಯಿಗೆ ಕೇಳಿದೆನು. ತಾನು ಹರೆಯದವಳಿದ್ದಾಗ ಪರಿಚರ್ಯೆಯಲ್ಲಿ ತೊಡಗಿರಲು ನಾನು ಹುಟ್ಟಿದೆನು' ಎಂದು ಆಕೆ ಹೇಳಿದಳು. ಆದುದರಿಂದ ಯಾರಾದರೂ ಕೇಳಿದರೆ, ಸತ್ಯಕಾಮ ಜಾಬಾಲನೆಂಬುದೆ ನನ್ನ ಹೆಸರು, ಎಂದು ಹೇಳಲು ನನಗೆ ಆಕೆ ಅಪ್ಪಣೆಕೊಟ್ಟಿದ್ದಾಳೆ' ಎಂದು ಸರಲವಾಗಿ ಸತ್ಯಕಾಮನು ತನ್ನ ತಾಯಿಯ ಆಜ್ಞೆಯ ಮೇರೆಗೆ ಹೇಳಿದನು.

ಆ ನಿರ್ವ್ಯಾಜ ಬಾಲಕನ ಬಾಯಿಂದ ಈ ಸತ್ಯವಚನವನ್ನು ಕೇಳಿ ಹಾರಿದ್ರು-ಮತನು ಸಂತುಷ್ಟನಾದನು. ಅವನು ನಿಜವನರಿತ ನಿಷ್ಠಾವಂತ ಜ್ಞಾನಿಯು. ಜ್ಞಾನಕ್ಕೆ ಜಾತಿಕುಲಗೋತ್ರಗಳಿಲ್ಲ, ಶಿಷ್ಯನಲ್ಲಿ ಸತ್ಯ ಮತ್ತು ಜ್ಞಾನದ ಆತುರತೆಯನ್ನರಸಬೇಕಲ್ಲದೆ ಜಾತಿ, ವಯ, ಲಿಂಗಗಳನ್ನೆಣಿಸಕೂಡದು, ಎಂಬುದನ್ನು ಅವನು ಅರಿತಿದ್ದನು. ಆದುದರಿಂದ ನಸುನಗುತ್ತ ಮುನಿಯು ಸತ್ಯಕಾಮನಿಗೆ ಅಂದದ್ದು, 'ಪ್ರಿಯ ಶಿಷ್ಯನೇ, ನಿಜವಾದ ಬ್ರಹ್ಮಜಿಜ್ಞಾಸೆ ಇರದೆ ಹೋದರೆ ಇಂಥ ಸರಳತನವು ಸಂಭವಿಸದು. ನೀನು ಸತ್ಯವನ್ನು ಹೇಳಿರುವಿ. ಅಂದ ಬಳಿಕ ನೀನು ಬ್ರಾಹ್ಮಣನೆ ಸೈ. ಬಾ ನಿನಗೆ ಬ್ರಹ್ಮ-ಚರ್ಯದ ದೀಕ್ಷೆ ಕೊಡುವೆನು. ಯಾಕಂದರೆ ನೀನು ಸತ್ಯವನ್ನು ಬಿಡಲಿಲ್ಲ, ಸತ್ಯದಿಂದ ಕದಲಲಿಲ್ಲ.'

ಈ ರೀತಿ ದೀಕ್ಷೆಕೊಟ್ಟು ೪೦೦ ಕೃಶವಾದ ದುರ್ಬಲ ಆಕಳುಗಳನ್ನು ಆರಿಸಿ ಮುನಿಯು ಅವುಗಳನ್ನು ಕಾಯಲಿಕ್ಕೆಂದು ಸತ್ಯಕಾಮನ ವಶಕ್ಕೆ ಕೊಟ್ಟನು. ಉತ್ಸಾಹಿಯಾದ ಆ ಬಾಲಕನು ಬಡಕು ಆಕಳುಗಳನ್ನು ನೋಡಿ ಎದೆಗುಂದದೆ, ಗುರುವಿನಾಜ್ಞೆಯ ಪರಿಪಾಲನೆಯಲ್ಲಿಯೆ ತನ್ನ ಮೋಕ್ಷವಿರುವುದೆಂದು ನಂಬಿ, ಅವು ಪುಷ್ಟವಾಗಿ ಒಂದು ಸಾವಿರವಾಗುವವರೆಗೆ ತಿರುಗಿ ಆಶ್ರಮಕ್ಕೆ ಬರಲಿಕ್ಕಿಲ್ಲ ವೆಂದು ಪ್ರತಿಜ್ಞೆ ಮಾಡಿದನು.

ಆಕಳುಗಳನ್ನೆಲ್ಲ ಅಟ್ಟಡವಿಗೆ ಅಟ್ಟಿಕೊಂಡು ಹೋಗಿ ಸತ್ಯಕಾಮನು ಅವುಗಳನ್ನು ಒಮ್ಮನಸ್ಸಿನಿಂದ ಕಾಯತೊಡಗಿದನು. ಅವುಗಳನ್ನು ಅಕ್ಕರ ದಿಂದ ಕಾಯುವಾಗ ಅರಣ್ಯದ ಗಂಭೀರ ಏಕಾಂತವಾಸದಲ್ಲಿ ಅವನು ಸತ್ಯದ ಸ್ವರೂಪವನ್ನು ಕುರಿತು ವಿಚಾರಮಾಡುತಲೆ ಇದ್ದನು. ಈ ವಿಶ್ವದ ಗುಟ್ಟನ್ನರಿ ಯುವ ಆತುರವು ಅವನಿಗೆ ಅತಿಶಯವಾಗಿತ್ತು.

ಬೆಳಗಿನಿಂದ ಸಾಯಂಕಾಲದ ವರೆಗೆ ಪ್ರಕಾಶಪೂರ್ಣವಾದ ನಾಲ್ಕೂ

ದಿಕ್ಕುಗಳ ಕಡೆಗೆ ನೋಡುತ್ತ ಸತ್ಯವು, ಬ್ರಹ್ಮವು, ನಿಜವಸ್ತುವು, ಆದಿಶಕ್ತಿಯು ಈ ಪ್ರಕಾಶರೂಪವಿರಬಹುದೊ, ಎಂದು ತನ್ನಷ್ಟಕ್ಕೆ ತಾನೆ ಪ್ರಶ್ನಿಸಮಾಡು ತಿದ್ದನು. ಒಮ್ಮೆ ವಿಶಾಲವಾಗಿ ಪಸರಿಸಿದ ಪೃಥಿವಿ, ಅನಂತ ಆಕಾಶ, ಇವುಗಳನ್ನು ನೋಡಿ ಸತ್ಯವು ಅನಂತವಿರಬಹುದೊ, ಎಂದು ಯೋಚಿಸುತಿದ್ದನು. ಇನ್ನೊಮ್ಮೆ ಪ್ರಖರವಾದ ಅಗ್ನಿ, ಪ್ರಚಂಡ ತೇಜಸ್ಸುಳ್ಳ ಸೂರ್ಯ, ಪ್ರಶಾಂತ ಜ್ಯೋತಿಯಾದ ಚಂದ್ರ, ಮಿಂಚಿಹೋಗುವ ವಿದ್ಯುತ್ತು ಇವುಗಳನ್ನು ಧ್ಯಾನಿಸಿ ಸತ್ಯವು ಜ್ಯೋತಿಃಸ್ವರೂಪವಿರಬಲ್ಲದೇನು, ಎಂದು ಅವನು ಬಗೆಯುತಿದ್ದನು. ಮತ್ತೊಮ್ಮೆ ತನ್ನ ಇಂದ್ರಿಯಸಂವೇದಗಳ ಆಶ್ರಯಸ್ಥಾನವಾದ ಮನದಂತೆ ವಿಶ್ವವ್ಯಾಪಾರಗಳಿಗೆ ಸತ್ಯವು ಆಧಾರವಾಗಿರಬಹುದೊ, ಎಂದು ಸತ್ಯಕಾಮನು ವಿಚಾರಿಸುತಿದ್ದನು. ಹೀಗೆ ನಿತ್ಯ ಆಲೋಚಿಸುತಿರಲು ಸತ್ಯವು ಇವೆಲ್ಲವುಗಳಾಚೆಗೆ ಇದ್ದು, ಇವೆಲ್ಲ ಆ ಸತ್ಯದಿಂದಲೆ ಪ್ರಕಟವಾಗಿ ಆ ಸತ್ಯದಲ್ಲಿಯೆ ಪ್ರತಿಷ್ಠಿತವಿರುವವು; ಆ ಸತ್ಯವು ಅವ್ಯಕ್ತವು, ಅಗೋಚರವು, ಕೇವಲ ನಿರವಯವು ಎಂಬುದು ಅವನಿಗೆ ಹೊಳೆಯಿತು.

ಹೀಗೆ ಹಲವು ವರ್ಷ ಸತ್ಯೋಪಾಸಕನಾಗಿ ಅನ್ವರ್ಥಕನಾಮವುಳ್ಳ ಸತ್ಯಕಾಮನು ಆಕಳುಗಳನ್ನು ಒಳ್ಳೆ ಪ್ರೀತಿಯಿಂದ ಕಾಪಾಡುತಿರಲು, ಅವು ಪುಷ್ಟವಾಗಿ ವೃದ್ಧಿಹೊಂದಿ ಒಂದು ಸಾವಿರವಾದವು. ಈಗ ತನ್ನ ಪ್ರತಿಜ್ಞೆಯು ಈಡೇರಿತು, ಎಂದು ಹರ್ಷಿತನಾಗಿ ಅವನು ಆಚಾರ್ಯಕುಲಕ್ಕೆ ಮರಳಿ ಬಂದನು. ಆಶ್ರಮದಿಂದ ತುಸು ಅಂತರದಲ್ಲಿ ಆಕಳುಗಳನ್ನು ನಿಲ್ಲಿಸಿ ಅವನು ಬಂದು ಗುರುಗಳ ಪಾದಕ್ಕೆರಗಿದನು. ಆಗ ಹಾರಿದ್ರುಮತನು ತನ್ನ ಪ್ರಿಯ ಶಿಷ್ಯನ ತಲೆಯಮೇಲೆ ವರದಹಸ್ತವನ್ನಿಟ್ಟು ಅವನನ್ನಪ್ಪಿಕೊಂಡು 'ನನ್ನ ಆತ್ಮಸ್ವರೂಪನೇ, ಯಥಾರ್ಥನಾಮನಾದ ಸತ್ಯಕಾಮನೇ, ಧನ್ಯಧನ್ಯ. ಈಗ ಸತ್ಯಜ್ಞಾನಿಯಂತೆ ನೀನು ಕಂಗೊಳಿಸುವಿ. ಬ್ರಹ್ಮವಿದರಂತೆ ನೀನು ಪ್ರಸನ್ನೇಂದ್ರಿಯನೂ ಹಸನ್ಮುಖನೂ ಕೃತಾರ್ಥನೂ ತೋರುವಿ. ನಿನಗೆ ಈ ವಿದ್ಯೆಯನ್ನು ಆ ನಿರ್ಜನ ಪ್ರದೇಶದಲ್ಲಿ ಯಾರು ಕಲಿಸಿದರು?' ಎಂದು ಆನಂದಾಶ್ರುಗಳನ್ನು ಸುರಿಸಿದನು.

ಆಗ ಸತ್ಯಕಾಮನು ವಿನಯಾತಿಶಯದಿಂದ, 'ಸ್ವಾಮಿನ್, ಆ ಅರಣ್ಯದ ಕಟ್ಟೇಕಾಂತದಲ್ಲಿ ನನಗೆ ವಿದ್ಯೆಯನ್ನು ಕಲಿಸುವವರಾರು? ಅವ್ಯಾಹತವಾಗಿ ನಡೆದಿರುವ ವಿಶ್ವದ ವ್ಯಾಪಾರಗಳ ಸತತ ಚಿಂತನದಿಂದ, ಮನೋವ್ಯಾಪಾರಗಳ

ಸೂಕ್ಷ್ಮ ನಿರೀಕ್ಷಣದಿಂದ, ಬ್ರಹ್ಮಚರ್ಯದಿಂದ ನನಗೆ ಈಗ ಇದ್ದ ಅಲ್ಪಸ್ವಲ್ಪ ಜ್ಞಾನವು ಪ್ರಾಪ್ತವಾಗಿರುವದು. ಆದರೆ ಈ ವಿದ್ಯೆಯ ಪರಿಪೂರ್ತಿಯು ತಮ್ಮಂತಹ ಜೀವಂತ ಜ್ಞಾನಮೂರ್ತಿಗಳಿಂದಲೆ ಆಗಬೇಕು,' ಎಂದು ತಲೆಬಾಗಿ ಕೈಜೋಡಿಸಿ ನಿಂತನು.

ಗುರುಶಿಷ್ಯರ ಪರಮ ಸಹೃದಯತೆಯ ಸುಂದರ ದೃಶ್ಯವು ಆಗ ಕಂಡುಬಂದಿತು. ಪರಿಪಕ್ವ ಫಲಕ್ಕೆ ಗಾಳಿ ಸೋಂಕಿದೊಡನೆ ಅದು ಮರದಿಂದ ತೊಟ್ಟನೆ ನೆಲಕ್ಕೆ ಬೀಳುವಂತೆ ಮನನಚಿಂತನಾದಿಗಳಿಂದ ಪಕ್ವವಾದ ಸತ್ಯಕಾಮನ ಚಿತ್ತವು ಗುರುಗಳ ಅನುಗ್ರಹದಿಂದ ಪಾಪಮುಕ್ತವೂ ಸಂಶಯರಹಿತವೂ ಆಗಿ ಸತ್ಯದಲ್ಲಿ ಲೀನವಾಯಿತು. ಸಕಲ ವಿಶ್ವವು ಒಂದೇ ಒಂದು ಚೈತನ್ಯಶಕ್ತಿಯ ನಿಯಮದಿಂದ ಸಾಗಿರುವದು. ಆ ಪರಾತ್ಪರ ಶಕ್ತಿಯೊಡನೆ ಧ್ಯಾನದಿಂದ ಒಂದಾಗಿ, ತನ್ನ ಶಕ್ತಿಗಳನ್ನೆಲ್ಲ ಅದಕ್ಕೆ ಅರ್ಪಿಸಿ ಅದರಿಂದ ಸ್ಫೂರ್ತಿಗೊಂಡು ಸಂಸಾರದಲ್ಲಿಯು ತನ್ನ ಕರ್ತವ್ಯವನ್ನು ಮಾಡುವುದೆ ಧರ್ಮ. ಸತ್ಯಧರ್ಮ ಎಂಬುದು ಪೂರ್ಣ ಮನದಟ್ಟಾಯಿತು. ಏಕಾಂತದಲ್ಲಿ ಆದ ಜ್ಞಾನವು ಗುರುಮುಖದಿಂದ ಬಂದ ಅಮೃತೋಪದೇಶವನ್ನು ಕೇಳಿ ಬಲಗೊಂಡಿತು, ಮತ್ತು ಸತ್ಯಕಾಮನು ಕೃತಾರ್ಥನಾದನು.

ಮುಂದೆ ಸುಶೀಲನಾದ ಅವನು ತನಗೆ ಪ್ರಾಪ್ತವಾದ ಬ್ರಹ್ಮಜ್ಞಾನವನ್ನು ಅನ್ಯರಿಗೆ ಉಪದೇಶಿಸುವ ವ್ರತವನ್ನು ಸ್ವೀಕರಿಸಿ ಗುರುಗೃಹದಿಂದ ತೆರಳಿದನು.

## ೩. ಉಪಕೋಸಲನ ಕಥೆ

ಹಾರಿದ್ರುಮತ ಗೌತಮನೆಂಬ ಗುರುವಿನಿಂದ ಪೂರ್ಣಜ್ಞಾನವನ್ನು ಪಡೆದ ಬಳಿಕ ಹಲವು ವರ್ಷಗಳನಂತರ ಸತ್ಯಕಾಮನು ಮಹಾಜ್ಞಾನಿಯೆಂದು ಹೆಸರಾದನು. ಆದುದರಿಂದ ಅವನೆಡೆಗೆ ಅನೇಕ ಶಿಷ್ಯರು ವಿದ್ಯಾರ್ಥಿಗಳಾಗಿ ಬಂದು ಇರುವಂಥವರಾದರು. ಆ ಶಿಷ್ಯರಲ್ಲಿ ಸತ್ಯಕಾಮನಿಗೆ ಬಹಳ ಪ್ರಿಯನಾದವನೊಬ್ಬ ಉಪಕೋಸಲನೆಂಬುವನು ಇದ್ದನು. ಅವನು ಬಹಳ ವ್ರತಸ್ಥನೂ ಸದಾಚಾರಿಯೂ ಆಜ್ಞಾಧಾರಕನೂ ಆಗಿದ್ದನು. ಹನ್ನೆರಡು ವರ್ಷಗಳಾದ

ಬಳಿಕ ಅವನೊಡನೆ ಇದ್ದ ಅನೇಕ ವಿದ್ಯಾರ್ಥಿಗಳಿಗೆ ಕೊನೆಯ ಉಪದೇಶ ಕೊಟ್ಟು ಅವರನ್ನು ಗುರುವು ಅವರವರ ಮನೆಗೆ ಹೋಗುವ ಅಪ್ಪಣೆಯನ್ನು ಕೊಟ್ಟುಬಿಟ್ಟನು. ಉಪಕೋಸಲನಿಗೆ ಮಾತ್ರ ಆ ರೀತಿ ಅಪ್ಪಣೆ ಕೊಡಲಿಲ್ಲ. ಈ ಪಕ್ಷಪಾತದ ರಹಸ್ಯವು ತಿಳಿಯದೆ ಗುರುಪತ್ನಿಯು ಗುರುವಿಗೆ ಅಂದದ್ದು, 'ಸ್ವಾಮಿನ್, ಈ ಬ್ರಹ್ಮಚಾರಿಯು ಈಗ ಹನ್ನೆರಡು ವರ್ಷ ಉತ್ತಮ ರೀತಿಯಿಂದ ಸೇವೆ ಮಾಡಿರುವನು. ಇವನಿಗೆ ವಿದ್ಯಾದಾನ ಮಾಡಿ, ಅನುಗ್ರಹಿಸಿ, ಕಳಿಸಿಬಿಡಬಾರದೆ?' ಹೆಂಡತಿಯ ಈ ಮಾತುಗಳಿಗೆ ಕಿವಿಗೊಡದೆ ಗುರುವು ಎಲ್ಲಿಯೊ ಪ್ರವಾಸಕ್ಕೆ ಹೊರಟುಹೋದನು.

ಇದರಿಂದ ಉಪಕೋಸಲನಿಗೆ ಒಂದುಬಗೆಯ ನಿರುತ್ಸಾಹ ಉಂಟಾಯಿತು. ತನ್ನನ್ನು ತಾಯಿಗಿಂತ ಹೆಚ್ಚು ಪ್ರೀತಿಸುವ ಗುರುಪತ್ನಿಯು ನಡುವೆಯಾಗಿ ತನ್ನ ಬಗ್ಗೆ ಹೇಳಿದರೂ ಗುರುಗಳು ತನಗೆ ಉಪದೇಶಕೊಡದೆ ಹೋದುದು ಅವನಿಗೆ ವಿಷಾದಕರವೆನಿಸಿತು. ಅವರು ಹಾಗೆ ದುರ್ಲಕ್ಷ್ಯಮಾಡಿದುದರ ಕಾರಣವು ಅವನಿಗೆ ತಿಳಿಯದೆ ಹೋಯಿತು. ತನ್ನಲ್ಲಿ ಏನಾದರೂ ದೋಷಗಳಿರಬಹುದೋ, ಎಂಬ ಸಂಶಯವು ಅವನ ಮನದಲ್ಲಿ ತಲೆದೋರಿತು. ಅವನು ಖಿನ್ನನಾಗಿ ತನ್ನ ದೋಷಗಳನೆಲ್ಲ ಸುಟ್ಟುಬಿಡಬೇಕೆಂದು ಉಪವಾಸವ್ರತವನ್ನು ಆರಂಭಿಸಿದನು; ಈ ಪ್ರಖರ ವ್ರತದಿಂದ ತಾನು ನಿರ್ಮಲನೂ ನಿರ್ದೋಷನೂ ಆಗುವನೆಂದು ಬಗೆದನು.

ಇದನ್ನು ನೋಡಿ ಶಿಷ್ಯವತ್ಸಲಳಾದ ಗುರುಪತ್ನಿಯು ಅವನಿಗೆ ಅಂದದ್ದು, 'ಬಾಳಾ, ಈ ಘೋರವಾದ ಅನಶನವ್ರತವನ್ನು ಏಕೆ ಕೈಕೊಂಡಿರುವಿ? ಖಿನ್ನನಾಗಬೇಡ. ಯಜಮಾನರು ಊರಿಂದ ಬಂದರೆಂದರೆ ನಾನು ಅವರಿಗೆ ಇನ್ನೊಮ್ಮೆ ಕೈಕಟ್ಟಿ ಹೇಳಿಕೊಂಡು ನಿನಗೆ ಉಪದೇಶ ಕೊಡಿಸುವೆನು. ಚಿಂತಿಸಬೇಡ. ಈ ಉಪವಾಸವನ್ನು ಬಿಟ್ಟುಬಿಡು.'

ಈ ಕಳವಳದ ಮಾತುಗಳನ್ನು ಕೇಳಿ ಉಪಕೋಸಲನು ಕಕ್ಕುಲತೆಯಿಂದ ಅಂದದ್ದು, 'ತಾಯೀ, ನಾನು ಖಿನ್ನನಾಗಿ ಈ ವ್ರತವನ್ನು ಆರಂಭಿಸಿಲ್ಲ. ನನ್ನಲ್ಲಿ ಅನೇಕ ಕಾಮನೆಗಳು ಮನೆಮಾಡಿಕೊಂಡಿವೆ. ಅನೇಕ ವ್ಯಾಧಿಗಳು ನನ್ನಲ್ಲಿ ಸೇರಿವೆ. ಅವುಗಳನ್ನು ಹೋಗಲಾಡಿಸುವುದೆ ಈ ವ್ರತದ ಉದ್ದೇಶವು, ದಯವಿಟ್ಟು ನೀನು ಸಂತಾಪಗೊಳ್ಳಬೇಡ.' ಇದನ್ನು ಕೇಳಿ ಗುರುಪತ್ನಿಯು ದುಃಖಿತಳಾದರೂ ಆಗಿನ ಮಟ್ಟಿಗೆ ಸುಮ್ಮನಿದ್ದಳು.

ಉಪಕೋಸಲನು ಉಪವಾಸವ್ರತವನ್ನು ಆಶ್ರಯಿಸಿದ್ದರೂ ತನ್ನ ನಿತ್ಯ ಕರ್ತವ್ಯಗಳನ್ನೂ ಅಗ್ನಿಹೋತ್ರಾದಿಗಳನ್ನೂ ಮಾಡುತಲೆ ಇದ್ದನು. ಅಗ್ನಿಯ ಎದುರಿಗೆ ಒಂದು ದಿನ ಧ್ಯಾನಸ್ಥನಾಗಿ ಕುಳಿತಿರಲು ಪ್ರಾಣವೆ, ಚೈತನ್ಯವೆ ಬ್ರಹ್ಮವು, ಅದೇ ಸುಖಧಾಮವು, ಅದೇ ಹೃದಯಾಂತರಾಕಾಶದಲ್ಲಿರುವದು, ಎಂಬ ಜ್ಞಾನವು ಅವನಿಗೆ ಹೊಳೆಯಿತು. ಸೂರ್ಯನಲ್ಲಿ, ಚಂದ್ರನಲ್ಲಿ, ವಿದ್ಯುತ್ತಿನಲ್ಲಿ, ನಕ್ಷತ್ರಾದಿಗಳಲ್ಲಿ ಅದೇ ಶಕ್ತಿಯು ಇರುವದು, ಅದೇ ಆತ್ಮವು, ಎಂದು ಅವನಿಗೆ ತೋಚಿತು. ಆಗ ಅವನ ಮನಸು ಪ್ರಸನ್ನವಾಯಿತು. ಮುಖವು ಪ್ರಫುಲ್ಲವೂ ತೇಜಸ್ವಿಯೂ ಆಯಿತು.

ಕೆಲದಿನಗಳಲ್ಲಿಯೆ ಗುರುಗಳು ಪ್ರವಾಸದಿಂದ ಮರಳಿ ಊರಿಗೆ ಬಂದರು. ಉಪಕೋಸಲನ ಮುಖದೆಡೆಗೆ ನೋಡಲಾಗಿ ಅದು ತೇಜಸ್ಸಿನಿಂದ ಮಿನುಗುತ್ತಿತ್ತು. ಆಗ ಸತ್ಯಕಾಮನು ಅಂದದ್ದು, 'ಶಿಷ್ಯವರನೇ, ಜ್ಞಾನಿಯ ಮುಖದಂತೆ ನಿನ್ನ ಮುಖವು ಪ್ರಸನ್ನ ತೋರುವದು. ನಿನಗೆ ಉಪದೇಶವನ್ನು ಯಾರು ತಾನೆ ಕೊಟ್ಟರು?' ಸ್ವಲ್ಪ ನಾಚಿ ಅತ್ಯಂತ ವಿನಯದಿಂದ ಗುರುಗಳ ಪಾದಕ್ಕೆರಗಿ ಉಪಕೋಸಲನು, 'ಗುರುಶ್ರೇಷ್ಠರೇ, ಅಗ್ನಿಸೇವೆ ಮಾಡುತಿರಲು ನನಗೆ ಈ ಜ್ಞಾನವು ಆಯಿತು' ಎಂದು ತನಗಾದ ಜ್ಞಾನದ ವಿವರವನ್ನು ಹೇಳಿದನು.

ಅವನ್ನು ಕೇಳಿ ಗುರುಗಳು ಅಂದದ್ದು, 'ಉಪಕೋಸಲಾ, ನಿನಗೆ ನಾನು ಈ ಮುಂದಿನ ವಿದ್ಯೆಯನ್ನು ಹೇಳುವೆನು ಕೇಳು. ಅದರಿಂದ ನೀನು ಪೂರ್ಣ ಜ್ಞಾನಿಯಾಗುವಿ. ಬ್ರಹ್ಮಾಂಡದಲ್ಲಿರುವ ಮೂಲಶಕ್ತಿಯನ್ನು ನೀನು ಗುರುತಿಸಿರುವಿ. ಅದರಂತೆಯೆ ನಿನ್ನಂತರದಲ್ಲಿಯ ಶಕ್ತಿಯನ್ನು ಗುರುತಿಸು, ಮತ್ತು ಆವೆರಡೂ ಒಂದೇ ಎಂದು ತಿಳಿ. ಪ್ರತಿಯೊಬ್ಬ ಪುರುಷನ ಕಣ್ಣಿನಲ್ಲಿ ಕಾಣುವ ತೇಜವೆ ಚಿತ್ ಶಕ್ತಿಯು, ಅದೇ ಚೈತನ್ಯವು, ಅದೇ ಆತ್ಮವು. ಅದೇ ಎಲ್ಲೆಲ್ಲಿಯೂ ವ್ಯಾಪ್ತವು, ಅನಂತವು, ಅಭಯವು, ಅಮೃತವು. ಆ ತೇಜವು ಅಲ್ಲಿರುವದರಿಂದಲೆ ಮನುಷ್ಯನು ಪ್ರಾಣವುಳ್ಳವನಿರುವನು. ತಾನು ಈ ದೇಹವಲ್ಲ, ಈ ಇಂದ್ರಿಯಸಂಕುಲವಲ್ಲ, ಈ ವಿನಾಶಿಯಾದ ವ್ಯಕ್ತಿಜೀವವಲ್ಲ, ಆದರೆ ತಾನು ಅವ್ಯಯ ಆತ್ಮನು ಎಂಬುದನ್ನರಿತವನು ನೀರು ಸೋಂಕದ ಪದ್ಮಪತ್ರದಂತೆ ನಿಷ್ಪಾಪನೂ ನಿರ್ದೋಷನೂ ಇರುವನು. ಇಂಥವನು ತೀರಿಕೊಂಡ ಬಳಿಕ ಅವನ ಉತ್ತರಕ್ರಿಯೆಗಳನ್ನು ಮಾಡಿದರೂ ಅಷ್ಟೇ ಬಿಟ್ಟರೂ ಅಷ್ಟೇ. ಅವನು ಜ್ಞಾನಮಾರ್ಗದಿಂದ, ತೇಜೋಮಾರ್ಗದಿಂದ ಬ್ರಹ್ಮಪದವನ್ನು ಪಡೆಯು

ವನು. ಅವನು ನಿರಾಲಂಬವಾದ ನಿರಂತರ ಆನಂದದಲ್ಲಿರುವನು. ಇದೇ ಪೂರ್ಣ ಜ್ಞಾನವು. ನಾನು ನಿನ್ನನ್ನು ಮಿಕ್ಕ ಶಿಷ್ಯರೊಡನೆ ಯಾಕೆ ಕಳುಹಲಿಲ್ಲ ಎಂಬುದು ಈಗಾದರೂ ತಿಳಿಯಿತೆ? ಆ ಎಲ್ಲರಲ್ಲಿ ನೀನೊಬ್ಬನೆ ಪೂರ್ಣ ಜ್ಞಾನವನ್ನು ಪಡೆಯಲು ಯೋಗ್ಯನು.'

ಇಷ್ಟು ಹೇಳಿ ಸತ್ಯಕಾಮನು ಶಿಷ್ಯನ ಕಣ್ಣಲ್ಲಿ ಕಣ್ಣಿಟ್ಟು ಒಮ್ಮೆ ಅತ್ಯಂತ ಅಕ್ಕರದಿಂದ ನೋಡಿ ಅವನನ್ನು ಅಪ್ಪಿಕೊಂಡನು ಹಾಗೂ ಅವನ ತಲೆಯ ಮೇಲೆ ವರದಹಸ್ತವನ್ನಿಟ್ಟು ಆಶೀರ್ವದಿಸಿದನು. ಗುರುಶಿಷ್ಯರ ಈ ಪರಸ್ಪರ ಸಂತೋಷದ ಕೂಟವನ್ನು ನೋಡಿ ಗುರುಪತ್ನಿಯು ಹರ್ಷಿತಳಾದಳು. ಆ ಬಳಿಕ ಉಪಕೋಸಲನು ಕೃತಾರ್ಥನಾಗಿ ತನ್ನ ಮನೆಗೆ ಹೋದನು ಮತ್ತು ಜ್ಞಾನಿಯಂತೆ ಆಮರಣವೂ ತನ್ನ ಕರ್ತವ್ಯದಲ್ಲಿ ನಿರತನಿದ್ದು ಎಲ್ಲರಿಗೂ ಆದರ್ಶಭೂತನಾದನು.

## ೪. ಉಷಸ್ತಿ ಚಾಕ್ರಾಯಣ

ಕುರುದೇಶದಲ್ಲಿ ಒಮ್ಮೆ ಅತಿಶಯ ಆಣೇಕಲ್ಲಿನ ಮಳೆ ಸುರಿದು ಬೆಳೆಗಳೆಲ್ಲ ನಷ್ಟವಾದವು. ಆದುದರಿಂದ ಆ ವರ್ಷ ಬಹಳ ದೊಡ್ಡ ಬರ ಬಿದ್ದಿತು. ಆ ದೇಶದ ಇಭ್ಯವೆಂಬ ಗ್ರಾಮದಲ್ಲಿ ಉಷಸ್ತಿ ಚಾಕ್ರಾಯಣನೆಂಬ ಒಬ್ಬ ಸಚ್ಛೀಲ ಗೃಹಸ್ಥನು ತನ್ನ ಹೆಂಡತಿಯೊಡನೆ ವಾಸಮಾಡುತಿದ್ದನು. ಮೇಲೆ ಹೇಳಿದಂತೆ ಕಡುತರವಾದ ಬರ ಬೀಳಲು ಅವನು ಹೊಟ್ಟೆಗಿಲ್ಲದೆ ಬಹಳ ಸಂಕಟದಿಂದ ಸಂಸಾರವನ್ನು ಸಾಗಿಸಬೇಕಾಯಿತು. ಒಂದು ದಿನವೆಂದರೆ ಒಂದು ಯುಗದಂತೆ ಅವನಿಗೆ ಎನಿಸುತಿತ್ತು.

ಒಂದು ದಿನ ಅವನು ಅತ್ತಿತ್ತ ಅನ್ನಾರ್ಥವಾಗಿ ಉಪವಾಸ ತಿರುಗಾಡುವಾಗ ಹಳೇ ಉದ್ದಿನ ಕಾಳುಗಳನ್ನು ತಿನ್ನುತ್ತ ಕುಳಿತ ಇಭ್ಯನೆಂಬವನನ್ನು ನೋಡಿದನು. 'ನಾನು ಬಹು ದಿವಸ ಉಪವಾಸವಿರುವೆನು, ನನಗೆ ನಾಲ್ಕು ಉದ್ದಿನ ಕಾಳುಗಳನ್ನು ಕೊಡು' ಎಂದು ನಮ್ರತನದಿಂದ ಬೇಡಿದನು. ಆಗ ಇಭ್ಯನು ಅಂದದ್ದು, 'ನಿನ್ನ ಸ್ಥಿತಿಯು ನಿಜವಾಗಿ ಕರುಣಾಸ್ಪದವಿದ್ದಂತೆ ತೋರು

ವದು. ಕಠಿಣ ಕಾಲವು ಯಾರಿಗೂ ಬಿಟ್ಟಿದ್ದಿಲ್ಲ. ಆದರೆ ನಾನು ತಿನ್ನುತ್ತಿರುವ ಈ ಉದ್ದು ಎಂಜಲಾಗಿರುವವು. ಇವುಗಳನ್ನು ನಿನಗೆ ಕೊಟ್ಟು ಪಾಪಕ್ಕೆ ಏಕೆ ಗುರಿಯಾಗಲಿ? ಇದರ ಹೊರತು ಬೇರೆ ಯಾವ ತಿನ್ನುವ ಪದಾರ್ಥವೂ ನನ್ನ ಕಡೆಗೆ ಇಲ್ಲ. ಏನು ಮಾಡಲಿ?' ಇದನ್ನು ಕೇಳಿ ಉಷಸ್ತಿಯು ದುರ್ಬಲನಾದರೂ ಗಟ್ಟಿಯಾದ ಸ್ವರದಿಂದ ಅಂದದ್ದು, 'ಏನೂ ಚಿಂತೆಯಿಲ್ಲ. ಅವುಗಳನ್ನೇ ಕೊಡು. ಈಗ ನಾನು ಅವನ್ನು ತಿನ್ನದಿದ್ದರೆ ಬದುಕಲಾರೆನು. ನನ್ನ ಪ್ರಾಣವು ಅಷ್ಟೊಂದು ಹತ್ತಿಗೆ ಬಂದಿರುವದು. ಇಂಥ ಪ್ರಸಂಗದಲ್ಲಿ ನಿನಗೂ ಪಾಪವು ತಗಲದು ಮತ್ತು ನಾನೂ ದೋಷಿಯಾಗಲಾರೆನು.' ಉಷಸ್ತಿಯ ಈ ಅಧಿಕಾರವಾಣಿಯನ್ನು ಕೇಳಿ ಇಭ್ಯನು ತಾನು ತಿನ್ನುತಿರುವ ಉದ್ದುಗಳೊಳಗಿನ ಬೊಗಸೆ ಉದ್ದನ್ನು ಉಷಸ್ತಿಗೆ ಕೊಟ್ಟು, 'ಇವುಗಳೊಡನೆ ಈ ನೀರನ್ನೂ ಸ್ವೀಕರಿಸು' ಎಂದು ನೀರಿನ ಪಾತ್ರೆಯನ್ನು ಮುಂದೆ ಮಾಡಿದನು. ಆದರೆ ಉಷಸ್ತಿಯು ಆ ಪಾತ್ರೆಯಲ್ಲಿಯ ನೀರನ್ನು ನಿರಾಕರಿಸಿ, 'ನೀರಿನ ಮಟ್ಟಿಗೆ ನನ್ನಲ್ಲಿ ಬೇಕಾದಷ್ಟು ಇವೆ. ನಿನ್ನ ಕಡೆಯಿಂದ ಎಂಜಲ ನೀರನ್ನು ಸ್ವೀಕರಿಸುವ ಕಾರಣವಿಲ್ಲ. ಅಂಥ ಕಾರಣವಿಲ್ಲದೆ ನಾನು ನಿಯಮಚ್ಯುತನಾಗಿ ಆಪದ್ಧರ್ಮದ ಆಶ್ರಯವನ್ನು ಏಕೆ ಮಾಡಬೇಕು?' ಹೀಗೆ ಅಂದು ಉಷಸ್ತಿಯು ಮನೆಗೆ ಹೊರಟುಹೋದನು.

ಉಷಸ್ತಿಯು ಆ ಉದ್ದುಗಳಲ್ಲಿ ನಾಲ್ಕು ಕಾಳು ತಿಂದು ಉಳಿದವುಗಳನ್ನು ತನ್ನ ಪ್ರಿಯ ಹೆಂಡತಿಗೆ ಕೊಟ್ಟನು. ಆಕೆ ಆ ಮೊದಲೆ ಬೇರೆ ಅನ್ನವನ್ನು ದೊರಕಿಸಿದ್ದರಿಂದ ಗಂಡನು ಕೊಟ್ಟ ಉದ್ದುಗಳನ್ನು ಹಾಗೆಯೆ ಕಾದಿಟ್ಟಳು.

ಮಾರನೆಯ ದಿನ ಬೆಳಗಾದೊಡನೆ ಉಷಸ್ತಿಯ ಕರ್ತವ್ಯದಕ್ಷಳಾದ ಹೆಂಡತಿಯು ಉಳಿದ ಉದ್ದುಗಳನ್ನು ಗಂಡನ ಮುಂದೆ ಇಟ್ಟಳು. ಅವನು ಅವುಗಳನ್ನು ತಿಂದು ಸಂತುಷ್ಟನಾಗಿ ಸಮೀಪದಲ್ಲಿಯೆ ಆ ದೇಶದ ಅರಸನು ಯಜ್ಞ ಮಾಡುತಿರುವಲ್ಲಿ ಹೋದನು. ಆ ದಿನ ಆ ಉದ್ದು ತಿನ್ನಲಿಕ್ಕೆ ಸಿಕ್ಕದಿದ್ದರೆ ಆ ಯಜ್ಞಶಾಲೆಯ ವರೆಗೆ ಹೋಗುವ ಸಾಮರ್ಥ್ಯವು ಕೂಡ ಅವನಿಗೆ ಬರುತಿರಲಿಲ್ಲ. ಉಷಸ್ತಿಯು ಒಳ್ಳೆ ವಿದ್ವಾಂಸನು. ಅವನು ಯಜ್ಞಮಂಡಪಕ್ಕೆ ಹೋಗಿ ಅಲ್ಲಿಯ ಋತ್ವಿಕ್ಕುಗಳನ್ನು ಪರೀಕ್ಷಿಸಬೇಕೆಂದು ಅಂದದ್ದು, 'ನೀವು ಯಾವ ದೇವತೆಗಳನ್ನು ಕುರಿತು ಮಂತ್ರಾದಿಗಳನ್ನು ಅನ್ನುತಿರುವಿರಿ? ಪೂರ್ಣಜ್ಞಾನವಿಲ್ಲದೆ ನೀವು ಗಿಳಿಯಂತೆ ಬರಿಯ ಶಬ್ದೋಚ್ಚಾರಣೆ ಮಾಡುತಿದ್ದರೆ ನಿಮ್ಮ

ತಲೆಯು ಕತ್ತರಿಸಿ ಬೀಳುವದು ಮತ್ತು ಯಜ್ಞವು ವ್ಯರ್ಥವಾಗುವದು.' ಇದನ್ನು ಕೇಳಿ ಋತ್ವಿಜರು ಬೆರಗಾದರು.

ಪಾಪ! ನಿಜವಾಗಿಯೆ ಅವರು ಅಂಥ ಪಂಡಿತರಿರಲಿಲ್ಲ. ಆ ಪ್ರಸಂಗದಲ್ಲಿ ಯಜಮಾನನು ಒಮ್ಮೆಲೆ ಮುಂದೆ ಬಂದು ಉಷಸ್ತಿಗೆ ವಿನಮ್ರನಾಗಿ ಅಂದದ್ದು, 'ಹೇ ವಿದ್ವನ್ಮಣಿಯೇ, ನಾನು ಆಳುಗಳನ್ನು ಕಳಿಸಿ ನಿನ್ನನ್ನು ಹುಡುಕಾಡಿಸಿದೆನು. ಆದರೆ ನೀನು ಬೇಗ ದೊರೆಯಲಿಲ್ಲ. ಆದುದರಿಂದ ಇವರನ್ನು ಕರೆ ತಂದು ಯಜ್ಞವನ್ನು ಪ್ರಾರಂಭಿಸಿದೆನು. ಇನ್ನು ಅನಾಯಾಸವಾಗಿ ನೀನು ಬಂದಿರುವಿ. ಇಲ್ಲಿಯೆ ಇದ್ದು ಯಥಾಸಾಂಗವಾಗಿ ಈ ಯಜ್ಞಕರ್ಮವನ್ನು ಪೂರೈಸಿ ನನ್ನನ್ನು ಧನ್ಯಗೊಳಿಸು. ನಿನಗೆ ಸಾಕಷ್ಟು ದಕ್ಷಿಣೆಯನ್ನು ಕೊಟ್ಟು ನಿನ್ನ ಸೇವೆ ಮಾಡುವೆನು.'

ರಾಜನ ಈ ಮಾತನ್ನು ಕೇಳಿ ಸಂತುಷ್ಟವಾಗಿ ಉಷಸ್ತಿಯು ಅಂದದ್ದು, 'ರಾಜಾ, ಯಜ್ಞತತ್ವವನ್ನೂ ಯಜ್ಞದೇವತೆಗಳನ್ನೂ ಹೇಳುವೆನು ಕೇಳು. ಯಾವ ಕರ್ಮದಿಂದ ಈ ಸೃಷ್ಟಿಚಕ್ರವು ಅವ್ಯಾಹತವೂ ಸುಸೂತ್ರವೂ ಸಾಗುವದೊ ಅದೇ ಯಜ್ಞವು. ಕಾಲಕಾಲಕ್ಕೆ ಯಜ್ಞಸ್ವರೂಪವು ಬದಲಾಗಬಹುದು, ಆದರೆ ಯಜ್ಞತತ್ವವು ಎಂದೂ ಬದಲಾಗದು. ಯಜ್ಞದಲ್ಲಿ ನಾವು ಯಾವಾಗಲೂ ಹೀನವಿದ್ದುದನ್ನು ದೇವತೆಗಳಿಗೆ ಆಹುತಿಕೊಟ್ಟು ಶ್ರೇಷ್ಠವಿದ್ದುದನ್ನು ಪಡೆಯುವೆವು. ಜೀವನಸೃಷ್ಟಿಯಲ್ಲಿ ಪ್ರಾಣವೆ ಎಲ್ಲಕ್ಕೂ ಶ್ರೇಷ್ಠಶಕ್ತಿಯು. ಆದರೆ ಈ ಪ್ರಾಣಶಕ್ತಿಯ ಮೂಲವು ಸೂರ್ಯದೇವತೆಯಲ್ಲಿದೆ. ಈ ಗ್ರಹಮಂಡಲಕ್ಕೆ ಆದಿತ್ಯನೇ ಜೀವನದಾಯಿಯು. ಅಣುಜೀವದಿಂದ ಮೊದಲುಮಾಡಿ ಅತ್ಯಂತ ಉಚ್ಚಜೀವಗಳ ವರೆಗೆ ಎಲ್ಲವೂ ಈ ಸೂರ್ಯನ ಅಧೀನ. ಇನ್ನು ಪ್ರಾಣಕ್ಕೆ ಅನ್ನವೆ ಆಧಾರವು. ಅನ್ನದ ಆಹುತಿಯಿಂದ ಪ್ರಾಣದ ವೃದ್ಧಿ, ಪ್ರಾಣದ ಧ್ಯಾನದಿಂದ ಸೂರ್ಯನು ಸಂತುಷ್ಟನಾಗುವನು. ಹೇ ಋತ್ವಿಕ್ಕುಗಳೇ ಮತ್ತು ಯಜಮಾನನಾದ ಅರಸನೇ, ಈ ತತ್ವವನ್ನು ತಿಳಿದು ಯಜ್ಞಗಳನ್ನು ನಡೆಸಿರಿ. ಅಂದರೆ ನಿಮ್ಮ ಈ ರಾಜ್ಯದಲ್ಲಿ ಯಾವುದಕ್ಕೂ ಕೊರತೆಯಾಗಲಿಕ್ಕಿಲ್ಲ.'

ಈ ಯಜ್ಞತತ್ವವನ್ನರಿತು ಅರಸನು ಕೃತಾರ್ಥನಾದನು ಮತ್ತು ಋತ್ವಿಜರು ಸೂರ್ಯದೇವತೆಯೆ ಮುಖ್ಯವೆಂಬುದನ್ನು ತಿಳಿದು ಆ ದೇವತೆಯನ್ನನುಲಕ್ಷಿಸಿಯೆ ತಮ್ಮ ಕರ್ಮಗಳನ್ನು ನಡೆಸಿ ಧನ್ಯರಾದರು.

## ೫. ಪ್ರವಾಹಣ ಜೈವಲಿಯ ನಾಲ್ಕು ಪ್ರಶ್ನೆಗಳು

ಪೂರ್ವಕಾಲದಲ್ಲಿ ಯಜ್ಞಯಾಗಾದಿಗಳ ಸಮಯಕ್ಕೆ ಮತ್ತು ಸಭೆಗಳಲ್ಲಿ ವಿದ್ವಾಂಸರು ಕೂಡಿ ತತ್ವಚರ್ಚೆ ಮಾಡುತಿದ್ದರು. ಇಂತಹ ಒಂದು ಸಭೆ ಕೂಡಿದಾಗ ಅರುಣನ ಮೊಮ್ಮಗನಾದ ಶ್ವೇತಕೇತು ಆರುಣೇಯನೆಂಬ ಋಷಿ ಕುಮಾರನು ಪಂಚಾಲರ ಸಭೆಗೆ ಹೋದನು. ಅಲ್ಲಿ ಅತ್ತಿತ್ತನಿಂದ ಬಂದ ಅನೇಕ ವಿದ್ವಾಂಸರು ಕೂಡಿದ್ದರು. ಶ್ವೇತಕೇತುವು ಅಲ್ಲಿಗೆ ಹೋದೊಡನೆ ಪ್ರವಾಹಣ ಜೈವಲಿ ಎಂಬವನು ಅವನಿಗೆ ಅಂದದ್ದು, 'ಕುಮಾರನೇ, ನಿನಗೆ ತಂದೆಯವರು ಉಪದೇಶ ಕೊಟ್ಟಿರುವರೇನು?' 'ಭಗವನ್ ಆಹುದು, ಕೊಟ್ಟಿರುವರು' ಎಂದು ಶ್ವೇತಕೇತುವು ಒಳ್ಳೆ ಅಭಿಮಾನದಿಂದ ಹೇಳಿದನು. 'ಹಾಗಾದರೆ ನಿನಗೆ ಹಲವು ಪ್ರಶ್ನೆಗಳನ್ನು ಕೇಳುವೆನು' ಎಂದು ಪ್ರವಾಹಣನು ಅವನಿಗೆ ಪ್ರಶ್ನೆಮಾಡಲಾರಂಭಿಸಿದನು.

'ಮಡಿದ ಬಳಿಕ ಮನುಷ್ಯನು ಎಲ್ಲಿ ಹೋಗುವನು, ನೀ ಬಲ್ಲೆಯಾ?' ಎಂದು ಮೊದಲನೆಯ ಪ್ರಶ್ನೆ ಕೇಳಿದನು. 'ಅದು ನನಗೆ ಗೊತ್ತಿಲ್ಲ ಸ್ವಾಮೀ' ಎಂದು ಶ್ವೇತಕೇತುವು ಹೇಳಿದನು.

'ಮಡಿದು ಇಲ್ಲಿಂದ ತೆರಳಿದವರು ಮರಳಿ ಇಲ್ಲಿ ಹೇಗೆ ಬರುವರು, ಇದನ್ನು ಅರಿತಿರುವೆಯಾ?' ಎಂಬ ಎರಡನೆಯ ಪ್ರಶ್ನೆಗೂ 'ನಾನರಿಯೆ' ಎಂಬ ನಕಾರದ ಉತ್ತರವನ್ನೇ ಋಷಿಕುಮಾರನು ಕೊಟ್ಟನು.

'ಜ್ಞಾನಿಗಳ ಗತಿಯನ್ನೂ ಕಾಮ್ಯಕರ್ಮಿಗಳ ಗತಿಯನ್ನೂ ಅವರು ತಿರುಗಿಬರುವ ರೀತಿಯನ್ನೂ ನೀನು ಅರಿತುಕೊಂಡಿರುವಿಯೋ?' ಎಂದು ಪ್ರವಾಹಣನು ಮೂರನೆಯ ಪ್ರಶ್ನೆಯನ್ನು ಕೇಳಿದನು. ಪ್ರಶ್ನೆಗಳ ಉತ್ತರ ಗಳು ತನಗೆ ಗೊತ್ತಿರುವದಿಲ್ಲವೆಂಬುದನ್ನು ನೋಡಿ ಶ್ವೇತಕೇತುವು ವಿಷಾದ ಯುಕ್ತನಾಗಿ 'ಇದನ್ನು ನಾನು ತಿಳಿದುಕೊಂಡಿಲ್ಲ' ಎಂದು ಉತ್ತರಕೊಟ್ಟನು.

'ಹಾಗಾದರೆ ಇಲ್ಲಿಂದ ತೆರಳಿದವರು ಯಾವ ಪರಲೋಕಕ್ಕೆ ಹೋಗು ವರೋ ಆ ಪರಲೋಕವು ಯಾಕೆ ತುಂಬಿ ಹೋಗುವದಿಲ್ಲ, ಇದಾದರೂ ನಿನಗೆ ಗೊತ್ತೋ?' ಎಂಬ ನಾಲ್ಕನೆಯ ಪ್ರಶ್ನೆಯನ್ನು ಮಾಡಿದನು. ಪ್ರವಾಹಣನು ಕೇಳಿದ ಒಂದು ಪ್ರಶ್ನೆಯನ್ನೂ ತಾನು ಬಿಡಿಸದೆ ಹೋದುದರಿಂದ ಶ್ವೇತ-ಕೇತುವು ಬಹಳ ಕಳೆಗುಂದಿದನು. ಒಡೆಯಲಾರದ ಒಗಟಿನಂತೆ ತನಗೆ ಎದುರಾದ ಪ್ರಶ್ನೆಗಳು ಯಾವವೂ ಬಿಡುವದಿಲ್ಲವೆಂಬುದನ್ನು ಕಂಡು ಅವನು

ತಲೆಬಾಗಿ ನಾಚಿ ಪ್ರವಾಹಣನೆದುರಿಗೆ ಸ್ವಸ್ಥ ನಿಂತನು. ನಂತರ ಅಲ್ಲಿ ನಿಲ್ಲುವದೂ ತರವಲ್ಲ, ಎಂದು ಅವನು ಅಲ್ಲಿಂದ ಹೊರಟನು. ಅಂಥ ದೊಡ್ಡ ಸಭೆಯಲ್ಲಿ ತನಗೆ ಉಂಟಾದ ನಿರುತ್ಸಾಹವನ್ನೂ ಆದ ಅಪಮಾನವನ್ನೂ ಸಹಿಸದೆ ಆ ಕುಮಾರನು ನೆಟ್ಟಗೆ ತನ್ನ ತಂದೆಯ ಬಳಿಗೆ ಬಂದು, 'ಹಿರಿಯನೇ, ನನಗೆ ವಿದ್ಯೆಯನ್ನು ಕಲಿಸದೆ ಕಲಿಸಿರುವೆನೆಂದು ಹೇಳಿದೆಯಲ್ಲ ? ನಾನು ಪಂಚಾಲರ ಸಭೆಗೆ ಹೋದಾಗ ದೂರದೂರದಿಂದ ಬಂದ ಜನರಲ್ಲಿ ನನ್ನ ಅಪಹಾಸ್ಯವಾಯಿತು, ಕ್ಷತ್ರಿಯಶ್ರೇಷ್ಠನಾದ ಪ್ರವಾಹಣನು ಕೇಳಿದ ಯಾವ ಪ್ರಶ್ನೆಗೂ ನಾನು ಉತ್ತರಕೊಡಲರಿಯದೆ ಹೋದೆನು. ಅಂದಬಳಿಕ ನೀನು ಕಲಿಸಿದ ವಿದ್ಯೆಯಾದರೂ ಎಂತಹದು ಮತ್ತು ನಾನು ಕಲಿತದ್ದಾದರೂ ಏನು ? ಈಗ ನನ್ನಷ್ಟೇ ನಿನ್ನದಾದರೂ ಅಪಮಾನವಾಗಲಿಲ್ಲವೆ ?' ಎಂದು ಬಿರುನುಡಿದನು.

ಅದನ್ನು ಕೇಳಿ ತಂದೆಗೂ ಕೆಡಕೆನಿಸಿತು. ಆದರೆ ಧೈರ್ಯದಿಂದ ಮಗನನ್ನು ಸಮಾಧಾನಪಡಿಸಿ, 'ಮಗುವೇ, ಇದರಲ್ಲಿ ಅಪಮಾನವೇತರದು ? ಜ್ಞಾನಸಾಮ್ರಾಜ್ಯದಲ್ಲಿ ಮಾನಾಪಮಾನಕ್ಕೆ ಅನುವೇ ಇಲ್ಲ. ಅಮಾನಿತ್ವ, ವಿನಯ ಇವೇ ಜ್ಞಾನದ ಲಕ್ಷಣಗಳು. ಮಾನ, ಗರ್ವ ಇವು ಅಜ್ಞಾನದ ಲಕ್ಷಣಗಳು. ಇನ್ನು ನಿನಗೆ ಪ್ರವಾಹಣನು ಕೇಳಿದ ಪ್ರಶ್ನೆಗಳಾದರೂ ಯಾವವು, ಅವುಗಳನ್ನು ಹೇಳು' ಎಂದನು. ಆಗ ಎಲ್ಲ ಪ್ರಶ್ನೆಗಳನ್ನು ಮಗನು ವಿವರವಾಗಿ ತಂದೆಗೆ ಹೇಳಿದನು. ಅವುಗಳನ್ನು ಕೇಳಿ ಆರುಣಿಯು ಅಂದದ್ದು, 'ವತ್ಸಾ, ಇವುಗಳಲ್ಲಿ ಒಂದನ್ನಾದರೂ ನಾನರಿಯೆ. ಅಂದ ಬಳಿಕ ನಿನಗೆ ನಾನು ಅವುಗಳನ್ನು ಕಲಿಸುವ ಬಗೆ ಹೇಗೆ ? ನಡೆ. ನಾವಿಬ್ಬರೂ ಆ ಜ್ಞಾನಿಯಾದ ಪ್ರವಾಹಣನೆಡೆಗೆ ಹೋಗಿ ಈ ಪ್ರಶ್ನೆಗಳ ಉತ್ತರಗಳನ್ನು ಕೇಳಿಕೊಳ್ಳುವ. ಹೀಗೆ ಮಾಡುವದು ಅಪಮಾನಕಾರಕವೆಂದು ಒಂದು ಕ್ಷಣಹೊತ್ತಾದರೂ ತಿಳಿಯಬೇಡ. ನಾವು ನಮ್ರರಾಗಿಯೆ ಜ್ಞಾನವನ್ನು ದೊರಕಿಸತಕ್ಕದ್ದು. ವಿದ್ಯಾರ್ಥಿಗಳಿಗೆ ವೃಥಾಭಿಮಾನವು ಸಲ್ಲದು.'

ಹೀಗೆಂದು ಆ ಗೌತುಮಗೋತ್ರೋತ್ಪನ್ನನಾದ ಆರುಣಿಯು ತನ್ನ ಮಗನನ್ನು ಸಂಗಡ ಕರೆದುಕೊಂಡು ಪ್ರವಾಹಣ ಜೈವಲಿಯ ಬಳಿಗೆ ಹೋದನು. ಶೀಲವಂತನಾದ ಬ್ರಾಹ್ಮಣನು ತನ್ನ ಕಡೆಗೆ ಬಂದುದನ್ನು ನೋಡಿ ಆ ಕ್ಷತ್ರಿಯೋತ್ತಮನು ಆನಂದಬಟ್ಟು ಅವನಿಗೆ ತಕ್ಕ ಸತ್ಕಾರವನ್ನು ಮಾಡಿದನು. 'ಬ್ರಾಹ್ಮಣಶ್ರೇಷ್ಠನೇ, ಬೇಕಾದಷ್ಟು ಧನವನ್ನು ಬೇಡುವಂಥವನಾಗು.

ನಿನಗಾಗಿ ಬೊಕ್ಕಸವನ್ನು ತೆರೆದಿಟ್ಟಿರುವೆನು' ಎಂದು ವಿನಯಪೂರ್ವಕವಾಗಿ ಆ ತಂದೆಮಕ್ಕಳಿಗೆ ಹೇಳಿದನು.

ಆಗ ಆರುಣಿಯು ಅಂದದ್ದು, 'ಕ್ಷತ್ರಿಯವರನೇ, ನನಗೆ ದುಡ್ಡು ದುಗ್ಗಾಣಿ ಧನಸಂಪತ್ತುಗಳ ಆವಶ್ಯಕತೆಯಿಲ್ಲ. ನಾನು ಜ್ಞಾನಾರ್ಥಿಯಾಗಿ ನಿನ್ನ ಬಳಿಗೆ ಬಂದಿರುವೆನು. ನನ್ನ ಮಗನಿಗೆ ಕೇಳಿದ ಪ್ರಶ್ನೆಗಳ ಉತ್ತರಗಳನ್ನು ನನಗೆ ಹೇಳು, ಅಂದರೆ ನಾನು ತೃಪ್ತನಾಗುವೆನು. ಧನದಿಂದ ನಾನು ಸಮಾಧಾನ ಪಡಲಾರೆನು.' ಇದನ್ನು ಕೇಳಿ ಪ್ರವಾಹಣನು ಸ್ವಲ್ಪ ಗೊಂದಲದಲ್ಲಿ ಬಿದ್ದನು. ಆದರೆ ಒಬ್ಬ ಸಚ್ಛೀಲ ಬ್ರಾಹ್ಮಣನು ಮನೆಮುಟ್ಟಿ ಬಂದು ಜ್ಞಾನಭಿಕ್ಷೆ ಬೇಡಿದನಂತರ ಅದನ್ನು ಕೊಡದಿರುವದು ಸಾಧ್ಯವಿಲ್ಲ. ಆದುದರಿಂದ ತಂದೆ ಮಕ್ಕಳಿಬ್ಬರಿಗೂ ಅಲ್ಲಿ ಕೆಲಕಾಲ ಇರಹೇಳಿ ಆ ಬಳಿಕ ಆ ವಿದ್ಯೆಯನ್ನು ಪ್ರವಾಹಣನು ಅವರಿಗೆ ಹೇಳಿದನು.

ತಾನು ಹಾಕಿದ ಪ್ರಶ್ನೆಗಳ ಎಲ್ಲ ಉತ್ತರಗಳನ್ನು ಹೇಳುವ ಪೂರ್ವದಲ್ಲಿ ಪ್ರವಾಹಣನು ಅಂದದ್ದು, 'ಪೂಜ್ಯ ಬ್ರಾಹ್ಮಣನೇ, ಈ ವಿದ್ಯೆಯು ಇದುವರೆಗೆ ಕ್ಷತ್ರಿಯಪರಂಪರೆಯಲ್ಲಿಯೆ ಇರುವದು. ಆದುದರಿಂದ ಈ ವಿಷಯದಲ್ಲಿ ಕ್ಷತ್ರಿಯರ ವರ್ಚಸ್ಸು ಈಗ ನಡೆದಿರುವದು. ಆದರೆ ಯೋಗ್ಯನಾದ ನಿನಗೆ ಈಗ ಅದನ್ನು ಹೇಳುವೆನು ಕೇಳು.'

ಹೀಗೆ ಅಂದು ಕ್ರಮವಾಗಿ ತಾನು ಕೇಳಿದ ಎಲ್ಲ ಪ್ರಶ್ನೆಗಳಿಗೆ ಪ್ರವಾಹಣ ಜೈವಲಿಯು ಉತ್ತರಗಳನ್ನು ಕೊಟ್ಟನು. ಅವನು ಅಂದದ್ದೇನಂದರೆ, 'ಆ ಪ್ರಶ್ನೆಗಳ ಉತ್ತರಗಳನ್ನು ನನಗೆ ಗೊತ್ತಿದ್ದಮಟ್ಟಿಗೆ ಹೇಳುವೆನು ಕೇಳಿರಿ. ಇಲ್ಲಿ ಮಡಿದವರ ದೇಹವು ಪಂಚಭೂತಾತ್ಮಕವಿರುವದರಿಂದ ಅದು ಪೃಥ್ವಿ, ನೀರು, ತೇಜ, ಗಾಳಿ ಮತ್ತು ಆಕಾಶ ಇವುಗಳಲ್ಲಿ ಕೂಡಿ ಹೋಗುವದು. ಅವನ ಜೀವವು ದೇಹಬಿಟ್ಟು ಅಗಲುವದು ಮತ್ತು ಅವನ ಕರ್ಮಾನುಸಾರವಾಗಿ ಗತಿಯನ್ನು ಪಡೆಯುವದು. ಅವನು ಬ್ರಹ್ಮಜ್ಞಾನಿಯಾಗಿದ್ದರೆ ಜ್ಞಾನಮಾರ್ಗದಿಂದ ಬ್ರಹ್ಮಲೋಕಕ್ಕೆ ಹೋಗುವನು. ಅವನು ಮರಳಿ ಈ ಲೋಕಕ್ಕೆ ಬಾರನು. ಕಾಮ್ಯಬುದ್ಧಿಯಿಂದ ಬರೀ ಪುಣ್ಯಕರ್ಮಗಳನ್ನು ಮಾಡಿದ್ದರೆ ಅವನು ಪುಣ್ಯಲೋಕಗಳಿಗೆ ಹೋಗಿ, ಅಲ್ಲಿ ತನ್ನ ಪುಣ್ಯವು ಕ್ಷೀಣವಾಗುವವರೆಗೆ ಇದ್ದು ಪುನಃ ಈ ಲೋಕಕ್ಕೆ ಬರುವನು. ಪೂರ್ವಕರ್ಮಾನುಸಾರವಾಗಿ ಇಲ್ಲಿ ಸುಷ್ಟದುಷ್ಟಯೋನಿಗಳಲ್ಲಿ ಅವನಿಗೆ ಜನ್ಮ ಬರುವದು. ಅವನು ಇಲ್ಲಿರುವಾಗ

ಬರಿಯ ಪಾಪಾಚರಣದಲ್ಲಿಯೆ ಕಾಲ ಕಳೆದಿದ್ದರೆ, ವಿಶೇಷತಃ ಕಳವು, ಕುಡುಕ ತನ, ಗುರುಪತ್ನಿಗಮನ, ಬ್ರಹ್ಮಹತ್ಯೆ ಈ ಮಹಾಪಾತಕಗಳನ್ನು ಸ್ವತಃ ಮಾಡಿದ್ದರೆ ಇಲ್ಲವೆ ಇವುಗಳನ್ನು ಮಾಡಿದವರೊಡನೆ ಸಂಗ ಸಹವಾಸ ಮಾಡಿದ್ದರೆ, ಅವನು ಅತ್ತ ಜ್ಞಾನಲೋಕಕ್ಕೆ ಅಥವಾ ಇತ್ತ ಪುಣ್ಯಲೋಕಕ್ಕೆ ಹೀಗೆ ಎರಡೂ ಕಡೆಗೆ ಹೋಗದೆ ಪುನಃಪುನಃ ಇಲ್ಲಿಯೆ ಕ್ರಿಮಿಕೀಟ, ಹುಳಹುಪ್ಪಡಿಗಳ ಹೀನಯೋನಿಗಳಲ್ಲಿ ಹುಟ್ಟಿ ಕೋಟಲೆಗೊಳ್ಳುವನು.

‘ಈ ರೀತಿ ಇಲ್ಲಿ ಮಡಿದವರಲ್ಲಿ ಹಲವರು ಅಂದರೆ ಜ್ಞಾನಿಗಳು ಬ್ರಹ್ಮಲೋಕಕ್ಕೆ ಹೋಗಿಬಿಡುವರು. ಪುಣ್ಯವಂತರು ಕೆಲಕಾಲದ ಮಟ್ಟಿಗೆ ಮಾತ್ರ ಪರಲೋಕದಲ್ಲಿ ಅಂದರೆ ಪುಣ್ಯಲೋಕದಲ್ಲಿ ವಾಸಮಾಡಿ ತಮ್ಮ ಪುಣ್ಯಕ್ಷಯವಾದೊಡನೆ ಅಲ್ಲಿಂದ ಹೊರಟುಬರುವರು. ಮಿಕ್ಕವರು ಆ ಎರಡೂ ಲೋಕಗಳಿಗೆ ಹೋಗದೆ ಇಲ್ಲಿಯೆ ಹುಟ್ಟುಸಾವುಗಳಿಗೆ ಈಡಾಗಿ ಕ್ಷಣಭಂಗುರ ಸುಖದುಃಖಗಳ ಪೆಟ್ಟಿಗೆ ಗುರಿಯಾಗುವರು. ಆದುದರಿಂದ ಆ ಪುಣ್ಯಲೋಕವೆಂಬುದು ಎಂದಿಗೂ ತುಂಬಿಹೋಗುವದಿಲ್ಲ.’

ಇದೇ ಪ್ರವಾಹಣ ಜೈವಲಿಯು ಹೇಳಿದ ಪರಲೋಕಜ್ಞಾನವು. ಇದನ್ನು ಕೇಳಿ ಆರುಣಿ ಮತ್ತು ಅವನ ಮಗನಾದ ಶ್ವೇತಕೇತು ಇವರಿಬ್ಬರೂ ಕೃತಾರ್ಥರಾದರು, ಮತ್ತು ಜ್ಞಾನಪಡೆದು ಬ್ರಹ್ಮಲೋಕವನ್ನೈದುವುದೆ ಉತ್ತಮ ಮಾರ್ಗವೆಂಬುದನ್ನು ತಿಳಿದುಕೊಂಡರು. ಶ್ವೇತಕೇತುವು ಅಂದಿನಿಂದ ಹೆಚ್ಚು ವಿನಯಶೀಲನೂ ಗಂಭೀರನೂ ಆದನು ಹಾಗೂ ಜ್ಞಾನಪಡೆದು ಆನಂದದಲ್ಲಿ ಮುಳುಗಿದನು.

## ೬. ಅಶ್ವಪತಿ ಕೈಕೇಯನ ಜ್ಞಾನ

ಒಮ್ಮೆ ಪ್ರಾಚೀನಶಾಲ, ಸತ್ಯಯಜ್ಞ, ಇಂದ್ರದ್ಯುಮ್ನ, ಜನ, ಬುಡಿಲ ಈ ಐದು ಜನ ಸದ್ಗೃಹಸ್ಥರು ಜ್ಞಾನಚರ್ಚೆಯನ್ನು ನಡೆಸಿದರು. ಅವರು ವೇದಗಳನ್ನು ಚೆನ್ನಾಗಿ ಪಠಿಸಿದವರಿದ್ದರು. ಆತ್ಮನು ಯಾರು, ಬ್ರಹ್ಮವಸ್ತು ಎಂದರೇನು, ಆತ್ಯಂತಿಕ ಸತ್ಯವು ಯಾವುದು, ಎಂಬ ಬಗ್ಗೆ ಅವರು ಮೀಮಾಂಸೆ

ಯನ್ನು ಮಾಡತೊಡಗಿದ್ದರು. ತಮ್ಮತಮ್ಮೊಳಗೆ ಎಷ್ಟು ಚರ್ಚೆ ಮಾಡಿದರೂ ಅವರು ಯಾವ ನಿರ್ಣಯಕ್ಕೂ ಬಾರದೆ ಹೋದರು. ಇದು ತಮ್ಮ ಕಡೆಯಿಂದ ಬಗೆಹರಿಯುವದಿಲ್ಲವೆಂದು ತಿಳಿದು ಅವರು ಉದ್ದಾಲಕ ಆರುಣಿಯ ಕಡೆಗೆ ಹೋದರು. ತನಗೆ ಬೇಕಾದ ಆತ್ಮಜ್ಞಾನವನ್ನು ಅವನು ಚನ್ನಾಗಿ ಅರಿತಿರುವನೆಂದು ಅವರಿಗೆ ಗೊತ್ತಾಗಿತ್ತು.

ತನ್ನೆಡೆಗೆ ಜ್ಞಾನಾರ್ಥವಾಗಿ ಅವರೆಲ್ಲರೂ ಬಂದುದನ್ನು ನೋಡಿ ಉದ್ದಾಲಕ ಆರುಣಿಯು ತನ್ನಲ್ಲಿ ತಾನೆ ವಿಚಾರಮಾಡತೊಡಗಿದನು. ತನಗೆ ಗೊತ್ತಿದ್ದಷ್ಟು ಜ್ಞಾನವನ್ನು ಇವರಿಗೆ ಈಗಲೆ ಹೇಳಿಬಿಡಬೇಕೋ ಅಥವಾ ತನಗಿಂತ ಶ್ರೇಷ್ಠರ ಕಡೆಗೆ ಕರಕೊಂಡು ಹೋಗಬೇಕೋ ಎಂಬ ಬಗ್ಗೆ ಆಲೋಚಿಸಿ ಅವರನ್ನು ಅಶ್ವಪತಿ ಕೈಕೇಯರಾಜನ ಕಡೆಗೆ ಒಯ್ಯಬೇಕೆಂದು ನಿಶ್ಚಯಿಸಿದನು. ಅವನು ಅವರಿಗೆ ಅಂದದ್ದು, ‘ಪ್ರಿಯ ಬ್ರಹ್ಮಜಿಜ್ಞಾಸುಗಳೇ, ನೀವು ಅರಸುತ್ತ ಬಂದ ಬ್ರಹ್ಮಜ್ಞಾನವನ್ನು ಆ ಅಶ್ವಪತಿ ಎಂಬರಸನು ಚೆನ್ನಾಗಿ ಬಲ್ಲನು, ಅವನ ಬಳಿಗೆ ಎಲ್ಲರೂ ಹೋಗುವ.’ ಅದನ್ನು ಕೇಳಿ ಅವರೆಲ್ಲರೂ ಒಳ್ಳೆಯದು, ಎಂದು ಅಶ್ವಪತಿಯ ಕಡೆಗೆ ಸಾಗಿದರು.

ಜ್ಞಾನಯಾಚನೆ ಮಾಡುತ್ತ ತನ್ನೆಡೆಗೆ ಬಂದ ಆ ವೇದಸಂಪನ್ನರನ್ನು ಅರಸನು ಆದರದಿಂದ ಬರಮಾಡಿಕೊಂಡನು. ಅವರು ಜ್ಞಾನಕ್ಕಾಗಿಯೆ ತನ್ನ ಕಡೆಗೆ ಬಂದಿರುವರೆಂಬುದನ್ನು ಅವನು ಅರಿತಿದ್ದನು. ಆದರೆ ಏನೂ ಗೊತ್ತಿಲ್ಲದವನಂತೆ ನಟಿಸಿ ಅವರೆಲ್ಲರಿಗೂ ಆ ಅರಸನು ಅಂದದ್ದು, ‘ಹೇ ಪೂಜ್ಯರೇ, ತಾವು ಇಲ್ಲಿಯವರೆಗೆ ಬಂದುದು ನನಗೆ ಭೂಷಣಾಸ್ಪದವು. ನಾನು ಆಳುತ್ತಿರುವ ಈ ದೇಶವು ಪೂರ್ಣ ನಿರ್ದೋಷವಿರುವದು. ಈ ಭೂಮಿಯಲ್ಲಿ ಕಳ್ಳರಿಲ್ಲ, ಕವಡಿಚುಂಬಕರಿಲ್ಲ, ಸೆರೆಬಡಕರಿಲ್ಲ, ಅಗ್ನಿಹೋತ್ರ ವ್ರತವನ್ನು ಪಾಲಿಸದೆ ಇರುವ ಗೃಹಸ್ಥರಿಲ್ಲ, ಮೂಢರೂ ವೇದಪಠಣಮಾಡದೆ ಇರುವ ಬ್ರಾಹ್ಮಣರೂ ಇಲ್ಲಿ ಇಲ್ಲ. ಈ ನನ್ನ ರಾಜ್ಯದಲ್ಲಿ ಸ್ವೈರಾಚಾರಿಗಳು ಇಲ್ಲ. ಅಂದ ಬಳಿಕ ಸ್ವೈರಿಣಿಯರೆಲ್ಲಿಂದ ಬರಬೇಕು? ಈ ಬಗೆಯಾಗಿ ಸಜ್ಜನರ ಭೂಮಿಯಿದು. ಸುಶೀಲರು ಇರಲು ಯೋಗ್ಯವಾದ ದೇಶವಿದು. ನೀವು ಇಲ್ಲಿ ನಿಶ್ಚಿಂತರಾಗಿ ಇರಬಹುದು. ನಾನು ನಿಮಗೆ ಯಥೇಷ್ಟ ಧನವನ್ನು ಕೊಡುವೆನು.’

ಇದನ್ನು ಕೇಳಿ ಆ ಬ್ರಾಹ್ಮಣರು, ‘ಭೋ ರಾಜನ್, ನಿನ್ನ ರಾಜ್ಯದ ವ್ಯವಸ್ಥೆಯನ್ನು ಕೇಳಿ ನಮಗೆ ಸಂತೋಷವಾಗಿರುವದು. ಆದರೆ ನಾವು

ಅರ್ಥಾರ್ಥಿಗಳಲ್ಲ, ಜ್ಞಾನಾರ್ಥಿಗಳು. ನಮಗೆ ಬೇಕಾದುದನ್ನು ನೀನು ಕೊಟ್ಟರೆ ನಮ್ಮ ಇಷ್ಟಕಾರ್ಯವು ಸಿದ್ಧವಾಗುವದು. ನೀನು ಆತ್ಮಜ್ಞಾನಿಯೆಂದು ನಾವು ನಿನ್ನ ಲೌಕಿಕವನ್ನು ಕೇಳಿದ್ದೇವೆ. ಆ ಜ್ಞಾನವನ್ನು ಶೋಧಿಸುತ್ತ ಬಂದವರು ನಾವು. ಅದನ್ನು ನೀನು ನಮಗೆ ನೀಡು' ಎಂದು ಕೇಳಿಕೊಂಡರು.

ಅರಸನು ಅವರ ಜ್ಞಾನಪಿಪಾಸೆಯನ್ನು ನೋಡಿ ಸಂತುಷ್ಟನಾಗಿ 'ಒಳ್ಳೇದು. ತಾವು ನನ್ನನ್ನು ಕೇಳುವದು ಹೆಚ್ಚೋ, ನಾನು ನನಗೆ ಗೊತ್ತಿದ್ದ ಮಟ್ಟಿಗೆ ತಮಗೆ ಹೇಳಿ ತಮ್ಮ ಸೇವೆಮಾಡುವದು ಹೆಚ್ಚೋ? ನಾಳೆ ಬನ್ನಿರಿ. ಅವಶ್ಯವಾಗಿ ತಮ್ಮ ಸೇವೆಗೆ ಸಿದ್ಧನಿರುವೆನು' ಎಂದು ವಿನಯದಿಂದ ನುಡಿದನು.

ಮಾರನೇ ದಿನ ಬೆಳಿಗ್ಗೆ ಅವರು ಆರೂ ಜನರು, ತಮಗೆ ಇನ್ನು ಆತ್ಮಜ್ಞಾನವಾಗುವದು, ಮನದಿಚ್ಛೆ ಕೈಗೂಡುವದು, ಎಂದು ಉತ್ಸಾಹಭರಿತರಾಗಿ ಅರಸನೆಡೆಗೆ ಹೋದರು. ಆಗ ಅರಸನು ಅವರನ್ನು ಸತ್ಕಾರಪೂರ್ವಕವಾಗಿ ಕುಳ್ಳಿರಿಸಿಕೊಂಡು, ಪ್ರತಿಯೊಬ್ಬರಿಗೆ, 'ನೀವು ಸದ್ಯಕ್ಕೆ ಯಾವ ದೇವತೆಯ ಉಪಾಸನೆಯನ್ನು ಮಾಡುತಿರುವಿರಿ?' ಎಂಬ ಪ್ರಶ್ನೆಯನ್ನು ಕೇಳಿದನು.

ಆ ಪ್ರಶ್ನೆಗೆ ಪ್ರಾಚೀನಶಾಲನು ಅಂದದ್ದು, 'ಸ್ವರ್ಗವೆ ಎಲ್ಲಕ್ಕೂ ಶ್ರೇಷ್ಠವೆಂದು, ಅದೇ ಸತ್ಯವೆಂದು ನಾನು ಆ ಲೋಕವನ್ನು ಉಪಾಸಿಸುವೆನು.' ಅಶ್ವಪತಿಯು ಇದಕ್ಕೆ ಮರಳಿ ಅಂದದ್ದು, 'ಸ್ವರ್ಗಲೋಕವು ಪೂರ್ಣಸತ್ಯವಲ್ಲ; ಅದು ಪೂರ್ಣಸತ್ಯವಾದ ಆತ್ಮನ ಏಕದೇಶಮಾತ್ರವು, ಒಂದಂಶವು. ಅದರ ಉಪಾಸನೆಯಿಂದ ಕೂಡ ನಿನಗೆ ಸತ್ಫಲವು ದೊರೆಯುವದು, ಮತ್ತು ನೀನು ಪುಣ್ಯಲೋಕವನ್ನು ಪಡೆಯುವಿ. ಆದರೆ ಇದರಿಂದ ಪೂರ್ಣಜ್ಞಾನವಾಗಿ ನೀನು ಮುಕ್ತನಾಗಲಾರಿ. ನೀನು ಬೇಗನೆ ನನ್ನೆಡೆಗೆ ಬಂದುದು ಒಳಿತಾಯ್ತು, ಇಲ್ಲದಿದ್ದರೆ ನೀನು ಆ ಅಂಶಮಾತ್ರ ಅಪೂರ್ಣಜ್ಞಾನದಲ್ಲಿಯೆ ಸುತ್ತಾಡುತ್ತಿದ್ದಿ.'

ಅದೇ ಪ್ರಶ್ನೆಯನ್ನು ಸತ್ಯಯಜ್ಞನಿಗೆ ಮಾಡಲಾಗಿ ಅವನು, 'ಆದಿತ್ಯನೆ ಆತ್ಮನೆಂದು ನಾನು ಉಪಾಸಿಸುವೆನು' ಎಂದು ಹೇಳಿದನು. ಅದಕ್ಕೆ ಅಶ್ವ-ಪತಿಯು ಪ್ರಾಚೀನಶಾಲನಿಗೆ ಹೇಳಿದಂತೆಯೆ ಹೇಳಿದನು.

ಮುಂದೆ ಅದೇ ಪ್ರಶ್ನೆ ಮಾಡಲಾಗಿ ಇಂದ್ರದ್ಯುಮ್ನನು, ವಾಯುವೆ ಆತ್ಮನೆಂದು, ಜನನು ಆಕಾಶವೆ ಆತ್ಮನೆಂದು, ಬುಡಿಲನು ನೀರೆ ಆತ್ಮನೆಂದು, ಆರುಣಿಯು ಪೃಥಿವಿಯೆ ಆತ್ಮನೆಂದು, ಕ್ರಮದಿಂದ ಅಶ್ವಪತಿಗೆ ಹೇಳಿದರು. ಪ್ರಾಚೀನಶಾಲಾದಿ ಆರು ಜನರು ಸ್ವರ್ಗಾದಿಗಳೆ ಈ ವಿಶ್ವದ ಉತ್ಪತ್ತಿಸ್ಥಿತಿ

ಲಯುಕ್ಕೆ ಕಾರಣವಾದ ಶಕ್ತಿಗಳು ಎಂದು ತಿಳಿದುಕೊಂಡಿದ್ದರು. ಆದುದರಿಂದ ಅವರು ಅದೇ ಆತ್ಮ, ಅದೇ ಬ್ರಹ್ಮ ಎಂದು ಉಪಾಸಿಸುತ್ತಿದ್ದರು.

ಅವರ ಮಾತುಗಳನ್ನು ಕೇಳಿ ಅಶ್ವಪತಿಯು ಅಂದದ್ದು, 'ಬ್ರಾಹ್ಮಣ ವರ್ಯರೇ, ನೀವು ಆತ್ಮನನ್ನು ಈ ರೂಪದಲ್ಲಿ ಉಪಾಸಿಸುತ್ತಿರುವಿರಿ. ನಿಮ್ಮಲ್ಲಿ ಪ್ರತಿಯೊಬ್ಬನ ಉಪಾಸ್ಯವು ಬೇರೆ ಇರುವದು. ಆದರೆ ನೀವು ಉಪಾಸಿಸುತ್ತಿರುವ ಈ ಯಾವ ವಸ್ತುಗಳೂ ಪೂರ್ಣ ಆತ್ಮವಲ್ಲ. ಇವು ಆತ್ಮನ ಏಕಾಂಗಗಳು, ಅಂಶಮಾತ್ರಗಳು, ಕಲೆಗಳು. ನೀವು ಪೂರ್ಣ ಆತ್ಮನನ್ನು ಅರಿತಿಲ್ಲ. ಪೂರ್ಣ ಆತ್ಮನು ಸ್ವರ್ಗ, ಪೃಥಿವಿ, ಅಪ್ಪು, ತೇಜ, ವಾಯು, ಆಕಾಶಗಳಲ್ಲಿ ವ್ಯಾಪ್ತ ನಿದ್ದು, ಅವೆಲ್ಲವುಗಳಿಗಿಂತ ಸೂಕ್ಷ್ಮನಿದ್ದು, ಅವೆಲ್ಲವುಗಳಾಚೆಗೆ ಇರುವನು. ನೀವು ಮಾಡುತ್ತಿರುವ ಅಂಶಮಾತ್ರದ ಉಪಾಸನೆಯಿಂದ ಅಂಶಫಲವೆ ದೊರಕುವದು. ಆಮ್ರವೃಕ್ಷದ ತಳಿರಿನಿಂದ ಇಲ್ಲವೆ ನೆಳಲಿನಿಂದ ಇಲ್ಲವೆ ಹೂವಿನಿಂದ ಸಂತೃಪ್ತರಾಗುವವರು ಆಗಲಿ. ನಾನು ಅದರ ಪೂರ್ಣ ಪಕ್ವ ವಾದ ಸುಮಧುರ ಫಲವನ್ನೆ ಅಪೇಕ್ಷಿಸುವೆನು. ಈ ಅಖಿಲ ವಿಶ್ವದಲ್ಲಿ ವ್ಯಾಪ್ತ ನಾಗಿರುವ ವಿಶ್ವಾತ್ಮನ ಜ್ಞಾನವೆ ಪೂರ್ಣಜ್ಞಾನವು. ಅದರಿಂದಲೆ ನಿತ್ಯ ಆನಂದವು ದೊರೆಕೊಳ್ಳುವದು. ಯಾವನಿಗೆ ಸಚ್ಚಿದಾನಂದಸ್ವರೂಪನಾದ ಆತ್ಮನ ನಿತ್ಯ ಸಾಕ್ಷಾತ್ಕಾರವಾಗುವದೊ ಅವನ ವ್ಯಕ್ತಿಭಾವವು ನಷ್ಟವಾಗು ವದು, ಸ್ವಾರ್ಥಪರತೆಯು ಅಳಿದುಹೋಗುವದು ಮತ್ತು ಅವನು ತನ್ನಂತೆ ಪರರನ್ನು ಬಗೆದು ಸದೈವ ಪರೋಪಕಾರದಲ್ಲಿ ನಿರತನಾಗುವನು. ಅವನ ಪಾಪಗಳೆಲ್ಲ ಸುಟ್ಟುಹೋಗುವವು. ಅವನು ನಿಷ್ಪಾಪನೂ ಆಪ್ತಕಾಮನೂ ನಿಜಾನಂದಪರಿಪೂರ್ಣನೂ ಆಗುವನು.'

ಈ ಸತ್ಯಜ್ಞಾನವನ್ನು ಕೇಳಿ ಆ ಆರೂ ಜನರು ಸಂತುಷ್ಟರಾದರು. ತಾವು ಉಪಾಸಿಸುತ್ತಿದ್ದ ದೇವತೆಗಳು ಪೂರ್ಣವಲ್ಲವೆಂಬರಿವು ಅವರಿಗೆ ಆಯಿತು. ಪ್ರಭು, ವಿಭು, ಸ್ವಯಂಭು, ಸರ್ವಾತ್ಮನೆ ನಿಜವಾದ ಪರಮಾತ್ಮನು, ಅವನನ್ನೆ ಪ್ರತ್ಯಕ್ಷಮಾಡಿಕೊಳ್ಳಲಿಕ್ಕೆ ಬೇಕು, ಎಂದವರ ಮನವರಿಕೆಯಾಯಿತು. ಅವರು ಅಶ್ವಪತಿ ಕೈಕೇಯನು ಉಪದೇಶಿಸಿದ ಆತ್ಮಭಾವವನ್ನು ನೆಲೆಗೊಳಿಸಲು ಅಲ್ಲಿಂದ ಹೊರಟರು. ಅಶ್ವಪತಿಯು ಅವರಿಗೆ ಪೂರ್ಣಾತ್ಮನ ಜ್ಞಾನವನ್ನು ಹೇಳುವದಲ್ಲದೆ ಅವರಿಗೆ ಬೇಗನೆ ಸಾಕ್ಷಾತ್ಕಾರವು ಆಗಲೆಂದು ಅವರನ್ನು ಆಶೀರ್ವದಿಸಿ ಕಳಿಸಿದನು.

# ೭. ಆರುಣೀ ವಿದ್ಯೆ

ಪೂರ್ವಕಾಲದಲ್ಲಿ ಆರುಣಿಯೆಂಬ ಒಬ್ಬ ಬ್ರಹ್ಮಜ್ಞಾನಿಯು ಇದ್ದನು. ತನ್ನ ಮಗನು ದೊಡ್ಡವನಾದುದನ್ನು ನೋಡಿ ಅವನಿಗೆ ಒಂದು ದಿನ ಆರುಣಿಯು ಅಂದದ್ದು, 'ಮಗುವೇ, ನೀನು ಈಗ ಸಾಕಷ್ಟು ದೊಡ್ಡವನಾಗಿರುವಿ. ಇನ್ನು ಗುರುಗೃಹಕ್ಕೆ ಹೋಗಿ ಅಲ್ಲಿ ಬ್ರಹ್ಮಚರ್ಯದಿಂದ ಇದ್ದು ವೇದಪಠಣಮಾಡಿ ಬ್ರಹ್ಮವಿದ್ಯೆಯನ್ನು ಪಡೆಯುವಂಥವನಾಗು. ಯಾಕಂದರೆ ನಮ್ಮ ಕುಲದಲ್ಲಿ ವೇದಾಧ್ಯಯನ ಮಾಡದೆ ಇದ್ದವನು ಒಬ್ಬನೂ ಇಲ್ಲ. ಇವನು ಕೇವಲ ನಾಮಮಾತ್ರ ಬ್ರಾಹ್ಮಣನು, ಇವನಿಗೆ ವಿದ್ಯೆಯಿಲ್ಲ ಬುದ್ಧಿಯಿಲ್ಲ, ಎಂದು ನಮ್ಮವರಾರೂ ಎಂದಿಗೂ ಎನಿಸಿಕೊಂಡಿಲ್ಲ. ಈ ಪರಂಪರೆಯನ್ನು ನೀನಾದರೂ ಕಾಯಬೇಕಲ್ಲವೇ ? '

ಈ ಅಭಿಮಾನೋಕ್ತಿಯನ್ನು ಕೇಳಿ ಶ್ವೇತಕೇತುವು ಗುರುಕುಲಕ್ಕೆ ಹೋಗಲೊಪ್ಪಿದನು. ಹನ್ನೆರಡು ವರ್ಷ ತುಂಬಿದೊಡನೆ ಅವನನ್ನು ತಂದೆಯು ಒಳ್ಳೆ ಸುಪ್ರಸಿದ್ಧ ಗುರುವಿನ ಕಡೆಗೆ ಕಳುಹಿದನು. ಅಂದಿನಿಂದ ಗುರುಗೃಹದಲ್ಲಿ ಹನ್ನೆರಡು ವರ್ಷ ವಾಸಮಾಡಿ ಬ್ರಹ್ಮಚರ್ಯದಿಂದಿದ್ದು ಶ್ವೇತಕೇತುವು ವೇದಾದಿಗಳನ್ನು ಪಠಣ ಮಾಡಿದನು. ಅಧ್ಯಯನವನೆಲ್ಲ ಮುಗಿಸಿಕೊಂಡು ತಂದೆಯ ಬಳಿಗೆ ತಿರುಗಿ ಬಂದನು. ಆದರೆ ಪೂರ್ಣ ವಿದ್ಯಾವಂತನಾದವನು ಯಾವ ರೀತಿ ನಮ್ರನೂ ಗಂಭೀರನೂ ತೇಜಸ್ವಿಯೂ ಆತ್ಮನಿಷ್ಠನೂ ಇರುವನೊ ಹಾಗೆ ಮಾತ್ರ ಶ್ವೇತಕೇತುವು ಆಗಿಲ್ಲವೆಂಬುದನ್ನು ತಂದೆಯು ಕಂಡುಹಿಡಿದನು. ಅವನು ಅಹಂಮನ್ಯನೂ ತಾನು ದೊಡ್ಡ ವಕ್ತೃವೆಂದು ತಿಳಿದವನೂ ಗರ್ವಿಯೂ ಆಗಿರುವದನ್ನು ನೋಡಿ ಆರುಣಿಗೆ ಸ್ವಲ್ಪ ವಿಷಾದವಾಯಿತು.

ಆಗ ತಂದೆಯು ಅಂದದ್ದು, 'ಬಾಳಾ, ಇದೇನು ? ಸದ್ವಿದ್ಯೆಯ ಲಕ್ಷಣವೊಂದೂ ನಿನ್ನಲ್ಲಿ ಕಂಡುಬರುವದಿಲ್ಲ. ಯಾವುದನ್ನರಿತುಕೊಂಡರೆ ಎಲ್ಲವೂ ತಿಳಿಯುವದೊ ಆ ವಿದ್ಯೆಯನ್ನು ಕುರಿತು ನೀನು ಗುರುಗಳಿಗೆ ಪ್ರಶ್ನೆ ಮಾಡಲಿಲ್ಲವೆ ? ಅದನ್ನು ಅರಿಯದೆಯೆ ಇತ್ತ ಬಂದುಬಿಟ್ಟೆಯಾ ? ನಿಜವಾಗಿ ಆ ವಿದ್ಯೆಯೆ ಎಲ್ಲಕ್ಕೂ ಮಹತ್ವದ್ದು. ಮಿಕ್ಕದ್ದೆಲ್ಲ ಶಬ್ದಸೃಷ್ಟಿಯು. ಯಾವ ಪ್ರಕಾರ ಒಮ್ಮೆ ಮಣ್ಣಿನ ಗುಣಜ್ಞಾನವಾಯಿತೆಂದರೆ ಘಟಾದಿ ಎಲ್ಲ ಮಣ್ಣಿನ ವಸ್ತುಗಳ ಜ್ಞಾನವಾದಂತಾಗುವದೊ ಆ ಪ್ರಕಾರ ಬ್ರಹ್ಮಜ್ಞಾನವಾಯಿತೆಂದರೆ ಅಖಿಲ ವಿಶ್ವದ ಜ್ಞಾನವಾದಂತೆಯೆ ಸೈ. ಆಗಳಿನಿಂದ ಅನ್ನದ ಪರೀಕ್ಷೆ

ಯಾಗುವಂತೆ ಮಣ್ಣಿನ ಪರೀಕ್ಷೆಯಿಂದ ಮಣ್ಣಿನ ಎಲ್ಲ ವಸ್ತುಗಳ ಪರೀಕ್ಷೆಯಾಗುವದು. ಬಳಿಕ ಮಣ್ಣೆಂಬುದೆ ಒಂದು ವಸ್ತುವು, ಮಣ್ಣಿನ ಮಿಕ್ಕ ಪದಾರ್ಥಗಳು ಕೇವಲ ಹೆಸರಿಗೆ ಮಾತ್ರ ಬೇರೆ ಬೇರೆ ಕಾಣುವವು. ಅವೆಲ್ಲ ನಿಜವಾಗಿ ಮಣ್ಣೇ, ಮತ್ತಿನ್ನೇನು? ಮಣ್ಣಿನ ಆ ವಿವಿಧ ವಸ್ತುಗಳಿಗೆ ಹೆಸರು ಮಾತ್ರ ಬೇರೆ ಬೇರೆ, ಮೂಲ ಸತ್ಯವಸ್ತು ಒಂದೇ.'

ಇದನೆಲ್ಲ ಕೇಳಿ ಮಗನು ಸ್ವಲ್ಪ ನಾಚಿ ತನಗೆ ಆ ಸತ್ಯವಸ್ತುವಿನ ಜ್ಞಾನವು ಆಗಲಿಲ್ಲವೆಂದು ವಿಷಾದಿಸಿ ಅಂದದ್ದು, 'ಭಗವನ್, ಈ ಸರ್ವ ವಸ್ತುಗಳ ಜ್ಞಾನವನ್ನೊಳಗೊಂಡ ವಿದ್ಯೆಯು ನನ್ನ ಗುರುಗಳಿಗೆ ಗೊತ್ತಿರಲಿಲ್ಲ. ಗೊತ್ತಿದ್ದರೆ ಅವರು ನನಗೆ ಹೇಳದೆ ಇರುತಿದ್ದರೆ? ಇನ್ನು ತಾವೇ ಈ ವಿದ್ಯೆಯನ್ನು ನನಗೆ ಕಲಿಸಬೇಕು.'

ಮಗನ ಮನದಲ್ಲಿ ಜ್ಞಾನಪಿಪಾಸೆಯು ಹುಟ್ಟಿದ್ದನ್ನು ನೋಡಿ ಆರುಣಿಗೆ ಸಂತೋಷವಾಯಿತು. ಅವನು ಅಂದದ್ದು, 'ಕಂದಾ, ಗುರುಗಳಿಗೆ ಗೊತ್ತಿರದ್ದುಂಟೇ? ಅಭಿಮಾನಯುಕ್ತನಾಗಿ, ನನಗೆ ಎಲ್ಲವೂ ತಿಳಿದಿರುವದು ಎಂಬ ಅಹಂಕಾರಮಿಕೆಯಿಂದ ನೀನೇ ಈ ಪ್ರಶ್ನೆಯನ್ನು ಕೇಳದೆ ಇತ್ತ ಬಂದಿರುವಿ. ಇರಲಿ, ಆದದ್ದಾಗಿಹೋಯಿತು. ಈಗ ನಿನಗೆ ಆ ಜ್ಞಾನವನ್ನು ಹೇಳುವೆನು, ಕೇಳು.'

'ಹಿರಿಯರೇ, ನನ್ನಲ್ಲಿ ನೀವು ಅಂಥ ದೋಷವನ್ನು ಕಂಡಿದ್ದರೆ ನನ್ನನ್ನು ಕ್ಷಮಿಸಬೇಕು. ಆ ಮಹಾವಿದ್ಯೆಯನ್ನು ಅರಿಯುವ ಅತ್ಯುತ್ಕಟ ಇಚ್ಛೆಯು ನನಗೆ ಉಂಟಾಗಿದೆ. ನಾನು ಚಿತ್ತೈಸಿ ಕೇಳುವೆನು. ತಾವು ಹೇಳಬೇಕು,' ಎಂದು ಶ್ವೇತಕೇತುವು ತಂದೆಯನ್ನು ಸೆರಗೊಡ್ಡಿ ಬೇಡಿಕೊಂಡನು.

ಜ್ಞಾನಾತುರನಾದ ಮಗನ ಕಡೆಗೆ ಕರುಣೆಯಿಂದ ನೋಡಿ ಆರುಣಿಯು ಜ್ಞಾನನಿರೂಪಣವನ್ನು ಪ್ರಾರಂಭಿಸಿದನು. 'ಮಗುವೇ ಕೇಳು. ಮೊಟ್ಟ ಮೊದಲು ಸತ್ ಎಂಬ ವಸ್ತುವೆ ಇತ್ತು. ಸತ್ ಅಂದರೆ ನಿತ್ಯವಸ್ತು, ತ್ರಿಕಾಲದಲ್ಲಿಯೂ ಒಂದೇ ಬಗೆಯಾಗಿ ಇರುವ ವಸ್ತು. ಕೆಲವರು ಅಸತ್ ಎಂಬುದು ಇತ್ತು ಎಂದೆನ್ನುವರು. ಅಸತ್ ಅಂದರೆ ಅಭಾವ, ಏನೂ ಇಲ್ಲದ ಸ್ಥಿತಿ. ಆದರೆ ಇದು ಅಸಂಭವ. ಅಸತ್‌ದಿಂದ ಸತ್ ಎಂಬುದು ಹುಟ್ಟುವ ಬಗೆ ಹೇಗೆ? ಸತ್ ಎಂಬುದೆ ಮೊಟ್ಟಮೊದಲು ಇದ್ದುದು ನಿಜವು. ಅದು ಮೊದಲು ಒಂದೇ ಒಂದು ಏಕಾಕಿಯಾಗಿ ಇತ್ತು. ಎರಡನೆಯದಾವುದೂ

ಆಗ ಇದ್ದಿಲ್ಲ. ಆಗ, ತಾನೇ ಅನೇಕವಾಗಬೇಕೆಂದು ಆ ಏಕವಾದ ಸತ್ ವಸ್ತುವು ಸಂಕಲ್ಪ ಮಾಡಿತು. ಆ ಸಂಕಲ್ಪದ ಮೂಲಕ ಸತ್‌ವಲ್ಲಿ ಪ್ರಥಮ ತೇಜವು, ತೇಜದಿಂದ ಅಪ್ಪು ಅಥವಾ ನೀರು, ಅದರಿಂದ ಅನ್ನ ಅಥವಾ ಜಡ ಎಂಬವು ಹುಟ್ಟಿದವು. ಆ ಮೂರು ತೇಜ, ಅಪ್ಪು ಮತ್ತು ಅನ್ನ ಇವು ಬೇರೆ ಬೇರೆ ಪ್ರಮಾಣಗಳಲ್ಲಿ ಕೂಡುವದರಿಂದ ಮುಂದೆ ಅನೇಕ ವಸ್ತುಗಳು ನಿರ್ಮಾಣ ವಾದವು. ಅವುಗಳಲ್ಲಿ ಸತ್ ಇದು ಸ್ವತಃ ಚೈತನ್ಯ ಅಥವಾ ಜೀವರೂಪದಿಂದ ಪ್ರವೇಶಿಸಿ ಈ ವಿವಿಧ ನಾಮರೂಪಾತ್ಮಕ ಸೃಷ್ಟಿಯನ್ನು ನಿರ್ಮಿಸಿತು.

'ಈ ಸೃಷ್ಟಿಯಲ್ಲಿ ಜೀವಕೋಟಿಯೆ ಹೆಚ್ಚಿನದು. ಜೀವಗಳಲ್ಲಿ ಮನುಷ್ಯನು ಹೆಚ್ಚಿನವನು. ಮನುಷ್ಯನಲ್ಲಿ ಮನ, ಪ್ರಾಣ, ವಾಣಿ ಇವೇ ಮುಖ್ಯ. ಮನವು ಅನ್ನಮಯವು, ಪ್ರಾಣವು ಆಪೋಮಯವು, ವಾಣಿಯು ತೇಜೋಮಯವು. ಹದಿನೈದು ದಿನ ಅನ್ನ ಬಿಟ್ಟು ನೀನು ಉಪವಾಸ ಮಾಡಿದರೆ ನಿನ್ನ ಸ್ಮೃತಿ ಶಕ್ತಿಯು ನಷ್ಟವಾಗಿ ಹೋಗುವದು. ಆ ಕಾಲದಲ್ಲಿ ನೀರು ಕುಡಿಯುತಿದ್ದರೆ ಪ್ರಾಣವು ನಿಲ್ಲುವದು. ಈ ಪ್ರಯೋಗವನ್ನು ನೀನು ಮಾಡಿ ನೋಡು.'

ಮಗನು ಆ ಪ್ರಕಾರ ಹದಿನೈದು ದಿವಸ ಉಪವಾಸ ಮಾಡಿ ತಂದೆಯ ಬಳಿಗೆ ಬಂದನು. ಆಗ ತಂದೆಯು ಅವನಿಗೆ ವೇದವನ್ನು ಅನ್ನಹೇಳಿದನು. ಶ್ವೇತಕೇತುವಿಗೆ ಏನೂ ನೆನಪಾಗಲಿಲ್ಲ. ಅದನ್ನು ನೋಡಿ ತಂದೆಯು ಅಂದದ್ದು, 'ಮಗುವೇ, ನೋಡಿದೆಯಾ? ಇನ್ನು ನೀನು ಅನ್ನವನ್ನು ತಿನ್ನು. ಇದುವರೆಗೆ ನೀನು ನೀರು ಕುಡಿಯುತ್ತಿರುವದರಿಂದ ಪ್ರಾಣವು ಉಳಿದಿದೆ. ಅನ್ನವನ್ನು ತಿಂದರೆ ಸ್ಮರಣಶಕ್ತಿಯು ಮರಳುವದು.' ಮಗನು ಅನ್ನವನ್ನು ತಿನ್ನಲಾರಂಭಿಸಲು ಅವನು ಪುನಃ ವೇದಗಳನ್ನು ಅನ್ನಲು ಸಮರ್ಥನಾದನು.

ಈ ಅನುಭವವನ್ನು ಪಡೆದ ಶ್ವೇತಕೇತುವಿಗೆ ಆರುಣಿಯು ಅಂದದ್ದು, 'ಮಗನೇ, ಕಿಡಿಯ ರೂಪದಿಂದ ಉಳಿದ ಬೆಂಕಿಯನ್ನು ಹುಲ್ಲು ಹಾಕಿ ಹೊತ್ತಿಸಲಿಕ್ಕೆ ಬರುವಂತೆ ಉಪವಾಸದ ಮೂಲಕ ಕಿಂಚಿನ್ಮಾತ್ರವಾಗಿ ಉಳಿದ ಮನಃಶ್ಶಕ್ತಿಯನ್ನು ಅನ್ನದಿಂದ ಬೆಳೆಸಲಿಕ್ಕೆ ಬರುವದು. ಇದು ನಿನಗೆ ಈಗ ಸ್ಪಷ್ಟವಾಗಲಿಲ್ಲವೇ? ಇನ್ನು ಮಲಗಿದಾಗ ಮನುಷ್ಯನ ಚಿತ್ತವು ಎಲ್ಲಿ ಹೋಗಿರುವದು ಅದನ್ನು ಹೇಳುವೆನು ಕೇಳು.

'ಮನುಷ್ಯನು ಮಲಗಿದಾಗ ರಕ್ತಾಭಿಸರಣ, ಉಸುರಾಡೋಣ, ಪಚನಕ್ರಿಯೆ ಇವೆಲ್ಲ ಪ್ರಾಣಶಕ್ತಿಯಿಂದ ನಡೆದಿರುತ್ತವೆ. ಆದರೆ ಚಿತ್ತವು ಮಾತ್ರ

ಎಲ್ಲಕ್ಕೂ ಮೂಲವಾದ ಸತ್‌ತತ್ವದಲ್ಲಿ ಒಂದಾಗಿರುತ್ತದೆ. ಅದೇ ನಮ್ಮ ಚೈತನ್ಯದ ಕೊನೆಯ ಆಶ್ರಯವು. ಆ ಸತ್‌ಶಕ್ತಿಯಿಂದಲೆ ವಿಶ್ವವ್ಯಾಪಾರಗಳೆಲ್ಲ ನಿಯಮಿತವಾಗಿ ನಡೆದಿರುವವು. ತಾಲಬದ್ಧ ಅನಂತ ಸಂಗೀತದಂತೆ ಸೃಷ್ಟಿಸ್ಥಿತಿಲಯಗಳೆಲ್ಲ ಆ ಸತ್ತಿನ ಸಾಮರ್ಥ್ಯದಿಂದಲೆ ನಡೆಯುವವು. ಅದರಲ್ಲಿಯೆ ಎಲ್ಲವೂ ನಿಂತಿರುವದು. ಮನುಷ್ಯನು ಸಾಯುವಾಗ ಸಹ ಅವನ ಚೈತನ್ಯವು ಆ ಸತ್ ತತ್ವದಲ್ಲಿಯೆ ಲೀನವಾಗುವದು. ಹೇಗೆಂದರೆ ಸಾಯುವವನ ವಾಣಿಯು ಮನದಲ್ಲಿ ಲಯಹೊಂದುವದು. ಮನವು ಪ್ರಾಣದಲ್ಲಿ ಗುಪ್ತವಾಗುವದು, ಪ್ರಾಣವು ತೇಜದಲ್ಲಿ ಅಡಗುವದು, ತೇಜವು ಆ ಪರಮ ಸದ್ವಸ್ತುವಿನಲ್ಲಿ ಲೀನವಾಗುವದು. ಆ ಸತ್ ಎಂಬುದು ಅತ್ಯಂತ ಸೂಕ್ಷ್ಮವು, ಅದರಿಂದಲೆ ಇದೆಲ್ಲ ವ್ಯಾಪ್ತವು. ಅದೇ ಸತ್ಯವು, ಅದೇ ಆತ್ಮವು. ಅದೇ ನೀನು ಇರುವಿ. ಹೇ ಶ್ವೇತಕೇತುವೇ, ನೀನು ನಶ್ವರವಾದ ಈ ದೇಹವಲ್ಲ, ಜಡವಿಂದ ಹುಟ್ಟಿ ಇದ್ದು ಬಿದ್ದು ಸತ್ತುಹೋಗುವ ಈ ಭಂಗುರ ದೇಹವು ನೀನಲ್ಲ. ನೀನು ಅಜರ, ಅಮರ ಆತ್ಮನು. ಇದೇ ನಾನು ಮೊದಲು ಸೂಚಿಸಿದ ವಿದ್ಯೆಯು, ಮಹಾಜ್ಞಾನವು. ಈ ಜ್ಞಾನದಿಂದಲೆ ನಿನ್ನ ಜೀವನವು ಅರ್ಥಪೂರ್ಣವಾಗುವದು.

'ಇನ್ನು ಈ ಜ್ಞಾನವನ್ನು ನಿನಗೆ ಇದಕ್ಕೂ ಹೆಚ್ಚು ಒಡೆದು ಹೇಳಬೇಕೆಂದು ನಾನು ಬೇರೆ ಬೇರೆ ದೃಷ್ಟಾಂತಗಳನ್ನು ಕೊಡುವೆನು ಕೇಳು. ಜೇನುಹುಳಗಳು ಅನೇಕಾನೇಕ ವಿವಿಧ ಹೂಗಳಿಂದ ತಂದ ತನಿರಸವನ್ನು ಒಂದಿಸಿ ಹುಟ್ಟಿನಲ್ಲಿ ಜೇನುತುಪ್ಪವನ್ನು ಸಂಗ್ರಹಿಸುವವು. ಒಮ್ಮೆ ಒಂದಾದ ಆ ತನಿರಸದ ಕಣಗಳಿಗೆ ತಾವು ಇಂಥ ಹೂವಿನಿಂದ ಬಂದವರು ಎಂದು ಗೊತ್ತಾಗುವದೊ? ಆ ತುಪ್ಪದಲ್ಲಿ ಅವು ಏಕರಸ, ಏಕಾಕಾರ, ಏಕಜೀವವಾಗಿ ಹೋಗುವವು. ಅದೇ ರೀತಿ ವಿವಿಧವೆಂದು ವಿಂಗಡವಾಗಿ ತೋರುವ ಪ್ರಾಣಿಗಳ ಚೈತನ್ಯವು ಆ ಸತ್ ವಸ್ತುವಿನಲ್ಲಿ ಏಕವಾಗಿ ಹೋಗುವದು. ದಿಕ್ಕುದಿಕ್ಕುಗಳಿಂದ ಪರಿಪರಿಯಾಗಿ ಹರಿದು ಸಾಗರವನ್ನು ಸೇರುವ ಹೊಳೆಗಳ ಹಾಡಾದರೂ ಇದೇ ಇರುವದು. ಆ ವಿಸ್ತೃತ ಜಲಾಶಯದಲ್ಲಿ ನಾನು ಈ ಹೊಳೆಯ ನೀರು, ನಾನು ಆ ಹೊಳೆಯ ನೀರು ಎಂಬುದು ಆ ನೀರಿಗೆ ಗೊತ್ತಿರುವದು ಸಾಧ್ಯವೆ? ಎಂದೂ ಇಲ್ಲ. ಒಮ್ಮೆ ಆ ನೀರಿನಲ್ಲಿ ಕೂಡಿದ ಬಳಿಕ ನೀರೆಂಬ ಒಂದೇ ವಸ್ತು ಉಳಿಯುವಂತೆ ಎಲ್ಲ ಚೈತನ್ಯಗಳು ಚಿದಂಬುಧಿಯಾದ ಸತ್-ವಸ್ತುವಿನಲ್ಲಿ ಒಂದಾದ

ಬಳಿಕ ಅವುಗಳ ಪೃಥಕ್‌ಭಾವವು, ತಾವು ಬೇರೆ ಬೇರೆ ಎಂಬ ಎಚ್ಚರವು, ಉಳಿಯಲರಿಯದು.'

ಈ ಪ್ರಕಾರ ತಂದೆಯು ಹೇಳಿದ ಜ್ಞಾನರಸದ ಸವಿಗಂಡು ಹೆಚ್ಚು ಉತ್ಸುಕನಾಗಿ ಶ್ವೇತಕೇತುವು ಮತ್ತೆ ತಂದೆಯನ್ನು ಕುರಿತು ಅಂದದ್ದು, 'ತಾತಾ, ನನಗೆ ಈ ಮನೋಹರ ವಿದ್ಯೆಯನ್ನು ಇನ್ನೂ ಸ್ಪಷ್ಟವಾಗಿ ಹೇಳು.'

ತನ್ನ ಪ್ರೀತಿಯ ಮಗನ ಪ್ರಶ್ನೆಗಳಿಗೆ ಉತ್ತರ ಕೊಡದಿರುವ ತಂದೆಯು ಎಲ್ಲಿಯಾದರೂ ಇರುವನೆ? ಮೇಲಿನ ಪ್ರಶ್ನೆ ಕೇಳಿ ಪ್ರಸನ್ನನಾಗಿ ಆತ್ಮ ಜ್ಞಾನದ ಬಗ್ಗೆ ತನ್ನ ಮಗನಿಗೆ ಹುಟ್ಟಿದ ಕುತೂಹಲವನ್ನು ನೋಡಿ, 'ಕಂದಾ, ನೀನು ಇಷ್ಟೊಂದು ಉತ್ಸುಕನಿದ್ದರೆ ಮತ್ತೆ ಹೇಳುವೆನು ಕೇಳು. ಇಕೋ ಈ ಗಿಡವು ಚಿಗಿತು ಪ್ರಫುಲ್ಲವಾಗಿ ನಿಂತಿರುವದು. ಇದಕ್ಕೆ ಅಲ್ಲಲ್ಲಿ ಕಚ್ಚು ಹಾಕಿದರೆ ರಸವು ಸ್ರವಿಸುವದು. ಆದರೆ ಮರಕ್ಕೆ ಧಕ್ಕೆಯಾಗದೆ ಅದು ಹಾಗೆಯೆ ನಿಲ್ಲುವದು. ಒಂದೇ ಟೊಂಗೆಯನ್ನು ಕಡಿದೊಗೆದರೆ ಆ ಟೊಂಗೆಯು ಮಾತ್ರ ಒಣಗಿಹೋಗುವದು. ಯಾಕಂದರೆ ಅದರೊಳಗಿನ ಚೈತನ್ಯವು ಹೊರಟು ಹೋಗುವದು. ಈ ಮರದೊಳಗಣ ಚೈತನ್ಯವು ಇಲ್ಲದಂತಾದರೆ ಇದಾದರೂ ಬಾಡುವದು. ಚೈತನ್ಯವೆ ಮುಖ್ಯವು. ಅದೇ ಅತ್ಯಂತ ಸೂಕ್ಷ್ಮವು, ಅದೇ ಸತ್ಯವು. ಅದೇ ನೀನಾದರೂ ಇರುವಿ. ಶ್ವೇತಕೇತುವೇ ಇದನ್ನು ಚೆನ್ನಾಗಿ ಅರಿತುಕೊ. ಇದೇ ಜ್ಞಾನವು, ಆತ್ಮಜ್ಞಾನವು.'

ಈ ದೃಷ್ಟಾಂತವನ್ನು ಕೇಳಿ ಮಗನು ಅಂದದ್ದು, 'ನೀವು ಆತ್ಮ, ಚೈತನ್ಯ, ಎಂದು ಹೇಳುವಿರಿ. ಅದೆಲ್ಲ ನನಗೆ ತಿಳಿಯಿತು. ಆದರೆ ಅದು ಗೋಚರವಾಗುವ ಬಗೆ ಹೇಗೆ?'

ಈ ಪ್ರಶ್ನೆ ಕೇಳಿ ಆರುಣಿಯು ನಸುನಕ್ಕು, 'ಮಗುವೇ, ಅಕೋ ಆ ಮಹಾ ವಟವೃಕ್ಷವು ಅಲ್ಲಿ ನಿಂತಿದೆ. ಅದರ ಒಂದು ಹಣ್ಣನ್ನು ಇತ್ತ ತಾ' ಎಂದನು. ಆಗ ಮಗನು ಒಂದು ಹಣ್ಣನ್ನು ತಂದನು. 'ಅದನ್ನು ಒಡೆ' ಎಂದು ತಂದೆಯು ಹೇಳಲು, 'ಇಕೋ ಒಡೆದೆನು' ಎಂದು ಮಗನು ಅದನ್ನು ಸೀಳಿ ಎರಡೂ ಹೋಳುಗಳನ್ನು ತಂದೆಯ ಎದುರಿಗೆ ಹಿಡಿದನು. 'ಇದರಲ್ಲಿ ನಿನಗೆ ಅನೇಕ ಬೀಜಗಳು ಕಾಣುವದಿಲ್ಲವೆ? ಅವುಗಳಲ್ಲಿ ಒಂದನ್ನು ಬೇರೆ ತೆಗೆ' ಎಂದು ಆರುಣಿಯು ಹೇಳಿದನು. ಸಾಸಿವೆಗಿಂತ ಸಣ್ಣದಾದ ಬೀಜವನ್ನು ಶ್ವೇತಕೇತುವು ತನ್ನ ಅಂಗೈಯಲ್ಲಿ ಹಿಡಿದು ತಂದೆಗೆ ತೋರಿದನು. ತಂದೆಯು

ಅಂದದ್ದು, 'ಅದನ್ನು ಸೀಳು. ನೋಡುವ, ಏನಿದೆ ಒಳಗೆ.' ಈ ಮಾತು ಕೇಳಿ ಮಗನು ಆ ಬೀಜವನ್ನು ಸೀಳಿ, 'ಇದರಲ್ಲಿಯಂತೂ ಏನೂ ಕಾಣುವ ದಿಲ್ಲ' ಎಂದನು. ಆರುಣಿಯು ಅಂದದ್ದು, 'ವತ್ಸಾ, ಆ ಒಳಗೆ ಏನೂ ಇಲ್ಲದ ಬೀಜದಿಂದಲೆ ಆ ಮಹಾವೃಕ್ಷವು ಹುಟ್ಟಿಲ್ಲವೆ? ಆದುದರಿಂದ ಅಲ್ಲಿ ಏನಾದರೂ ಇರಲಿಕ್ಕೆ ಬೇಕಲ್ಲವೆ? ಶೂನ್ಯದಿಂದ ಸಂಖ್ಯೆಯು ಹುಟ್ಟುವ ಬಗೆ ಹೇಗೆ? ಆದುದರಿಂದ ಕಣ್ಣಿಗೆ ಕಾಣದ ಶಕ್ತಿಯೊಂದು ಅಲ್ಲಿರುವದು. ಅದರಿಂದಲೆ ಇಂಥ ಮಹಾವಟವು ಹುಟ್ಟಬಲ್ಲದು. ಆ ಶಕ್ತಿಯು ಅತ್ಯಂತ ಸೂಕ್ಷ್ಮವು, ಅವ್ಯಕ್ತವು. ಅದೇ ಸರ್ವವ್ಯಾಪಿಯು, ಸತ್ಯವು, ಆತ್ಮವು. ತತ್ತ್ವತಃ ನೀನಾದರೂ ಅದೇ ಇರುವಿ, ತಿಳಿದೆಯಾ ಮಗುವೆ? ಇದನ್ನು ನಂಬು. ಈ ನಂಬುಗೆಯೆ ನಿನ್ನನ್ನು ಕಾಯುವದು. ಈ ನಂಬುಗೆ ಇಲ್ಲದೆ ಸತ್ಯದ ಜ್ಞಾನವಾಗದು.'

ಇದನ್ನು ಕೇಳಿ ಶ್ವೇತಕೇತುವು ಮತ್ತೆ ಅಂದದ್ದು, 'ಈ ಸೂಕ್ಷ್ಮವೆಂಬುದು, ಈ ಚೈತನ್ಯಶಕ್ತಿಯು ಈ ವಿಶ್ವದಲ್ಲಿ ಯಾವ ಪ್ರಕಾರವಾಗಿ ವ್ಯಾಪಿಸಿರುವದು?'

ಆಗ ತಂದೆಯು ಮತ್ತೆ ಒಂದು ದೃಷ್ಟಾಂತವನ್ನು ಕೊಟ್ಟು ಹೇಳಿದ್ದೇನಂದರೆ, 'ಇಕೋ, ಈ ನಾಲ್ಕು ಉಪ್ಪಿನ ಹರಳುಗಳನ್ನು ನೀರಲ್ಲಿ ಹಾಕು. ಅವು ಕರಗಿದ ಬಳಿಕ ಮೇಲೆ ಕೆಳಗೆ ಮಧ್ಯದಲ್ಲಿ ಬೇಕಾದಲ್ಲಿ ಆ ನೀರಿನ ರುಚಿ ನೋಡು. ಆ ನೀರು ಹೇಗೆ ಇರುವವು ಹೇಳು.' ತಂದೆಯು ಹೇಳಿದಂತೆ ಉಪ್ಪಿನ ಹರಳು ಹಾಕಿದ ನೀರಿನ ರುಚಿ ನೋಡಿ ಶ್ವೇತಕೇತುವು ಅಂದದ್ದು, 'ಈ ಎಲ್ಲ ನೀರು ಉಪ್ಪುಪ್ಪೆ ಇರುವದು.' 'ಆ ಉಪ್ಪನ್ನು ತೆಗೆದು ನನಗೆ ಕೊಡು' ಎಂದು ಆರುಣಿಯು ಕೇಳಿದನು. 'ಹಾಗೆ ಮಾಡಲಾರೆ. ಆ ಉಪ್ಪು ಈ ಎಲ್ಲ ನೀರಲ್ಲಿ ಬೇರ್ಪಡದಂತೆ ಒಂದಾಗಿ ವ್ಯಾಪಿಸಿದೆ' ಎಂದು ಮಗನು ಹೇಳಿದನು. ಅದನ್ನು ಕೇಳಿ ತಂದೆಯು ಅಂದದ್ದು, 'ನೀರಲ್ಲಿ ಬೆರೆತ ಉಪ್ಪು ಕಣ್ಣಿಗೆ ಕಾಣಲರಿಯದು. ತೆಗೆಯಬೇಕೆಂದರೆ ಬಾರದು. ಬೇರ್ಪಡಿಸಬೇಕೆಂದರೆ ಆಗದು. ಆದರೂ ಆ ಉಪ್ಪು ಅದರಲ್ಲಿರುವದೆಂಬುದು ಸತ್ಯಸಿದ್ಧಾಂತವು, ಅನುಭವಗಂಡ ಮಾತು. ಅದೇ ರೀತಿ ಬ್ರಹ್ಮವು ಸೃಷ್ಟಿಯಲ್ಲಿ ವ್ಯಾಪ್ತವು, ಆ ಸೂಕ್ಷ್ಮಬ್ರಹ್ಮವು ಸತ್ಯವು, ಅದೇ ಆತ್ಮವು. ಆಕಾಶದೊಳಗಣ ವಾಯುವಿನಂತೆ, ನೀರಲ್ಲಿಯ ತಂಪಿನಂತೆ ಆತ್ಮವು ಎಲ್ಲೆಲ್ಲಿಯೂ ವ್ಯಾಪ್ತವು. ನೀನಾದರೂ ಆ ಆತ್ಮವೇ ಇರುವಿ.'

ಮಗನು ಇದನ್ನು ಕೇಳಿ, 'ನೀವು ಹೇಳುವದೆಲ್ಲ ನಿಜವು. ಆದರೆ ಈ ಸತ್ಯದ ಸಾಕ್ಷಾತ್ಕಾರವಾಗುವ ಬಗೆ ಹೇಗೆ ? ಇದು ಕಣ್ಣಿಗೆ ಕಂಡು, ಮನಕ್ಕೆ ಹೊಳೆದು, ಬುದ್ಧಿಗೆ ತಿಳಿಯಬಹುದು. ಆದರೆ ಭಾಸದಲ್ಲಿ ಚಿರತು ಇದರ ಸತತ ಸಾಕ್ಷಾತ್ಕಾರವಾಗುವದು ಕಠಿಣ ತೋರುವದು.'

ಮಗನ ಈ ಪ್ರಶ್ನೆಗೆ ಉತ್ತರವೆಂದು ತಂದೆಯು ಅಂದದ್ದು, 'ಒಬ್ಬ ಮನುಷ್ಯನ ಕಣ್ಣು ಕಟ್ಟಿ ಅವನನ್ನು ದೂರ ದೇಶಕ್ಕೆ ಒಯ್ದು ಅಲ್ಲಿ ಬಿಟ್ಟು ಬಿಟ್ಟರೆ ಅವನ ಸ್ಥಿತಿಯು ಹೇಗೆ ಆಗುವದೊ ಹಾಗೆ ಅಜ್ಞಾನಿಗಳ ಸ್ಥಿತಿಯಿರುವದು. ಇಂಥವನ ಕರುಣಾಸ್ಪದ ಸ್ಥಿತಿಯನ್ನು ನೋಡಿ ಕನಿಕರಬಟ್ಟು ಯಾರಾದರೂ, ನಿನ್ನ ದೇಶವು ಇಂಥ ದಿಕ್ಕಿಗೆ ಇರುವದು, ನೀನು ಇಂಥಿಂಥ ಮಾರ್ಗದಿಂದ ಹೋಗು, ಎಂದು ಹೇಳಿದರೆ ಅವನು ಆ ಹಾದಿಯಿಂದ ತನ್ನ ದೇಶವು ಎಲ್ಲಿರುವದು ಎಂದು ಊರಿಂದೂರಿಗೆ ಕೇಳುತ್ತ ವಿಚಾರಿಸುತ್ತ ಹೋಗಿ ಕೊನೆಗೆ ತನ್ನ ಊರನ್ನು ಮುಟ್ಟುವನು. ಅನೇಕತೆ, ವಿಲಕ್ಷಣತೆ, ಚಮತ್ಕೃತಿ ಇವುಗಳಿಂದ ಮನಸನ್ನು ಗೊಂದಲಗೊಳಿಸುವ ಈ ಪ್ರಪಂಚದಲ್ಲಿ, ಈ ಸಂಸಾರದಲ್ಲಿ, ಈ ವಿವಿಧ ವಿಶ್ವದಲ್ಲಿ ಮನುಷ್ಯನ ಸ್ಥಿತಿಯು ಕಣ್ಣು ಕಟ್ಟಿ ಅಡವಿಯಲ್ಲಿ ಬಿಟ್ಟವನ ಸ್ಥಿತಿಯಂತೆಯೆ ಆಗುವದು. ಈ ವಿಶ್ವದ ಒಗಟನ್ನು ಬಿಡಿಸುವ ಗುರುವು ಯಾರಾದರೂ ಭೆಟ್ಟಿಯಾಗಿ ಕರುಣಿಸಿ ಆತ್ಮಜ್ಞಾನದ ಹಾದಿಯನ್ನು, ಸಾಕ್ಷಾತ್ಕಾರದ ಮಾರ್ಗವನ್ನು, ತನ್ನನ್ನರಿಯುವ ಯುಕ್ತಿಯನ್ನು ಹೇಳಿಕೊಟ್ಟರೆ ಮನುಷ್ಯನು ಆ ಗೊಂದಲದೊಳಗಿಂದ ಪಾರಾಗಬಲ್ಲನು. ಮನುಷ್ಯನ ಸುತ್ತಲು ಈ ವಿವಿಧತೆಯು ಎಷ್ಟೇ ಮುತ್ತಿಕೊಂಡಿದ್ದರೂ ನಾನಾತ್ವದ ನಟನೆಯು ಎಷ್ಟೇ ಭರದಿಂದ ನಡೆದಿದ್ದರೂ ಈ ಎಲ್ಲದರ ಮೂಲದಲ್ಲಿ, ಇದರ ಅಂತರಂಗದಲ್ಲಿ ಒಂದೇ ಒಂದು ಅತ್ಯಂತ ಸೂಕ್ಷ್ಮ ತತ್ವವಿರುವದು. ಅದೇ ಆತ್ಮವು. ಅದೇ ಎಲ್ಲೆಲ್ಲಿಯೂ ವ್ಯಾಪ್ತವು. ಬೀಸುವ ಬಿರುಗಾಳಿಯಿಂದ ಅಲ್ಲೋಲಕಲ್ಲೋಲವಾದ, ತೆರೆನೊರೆಗಳಿಂದ ಕ್ಷಣಕ್ಷಣಕ್ಕೆ ಬೇರೆ ಬೇರೆ ತೋರುವ ಸಾಗರದಲ್ಲಿ ನೀರೆಂಬುದೆ ಸತ್ಯವಿದ್ದಂತೆ ಈ ಬಹುರೂಪ ಸೃಷ್ಟಿಯಲ್ಲಿ ಆತ್ಮವೆಂಬುದೆ ಸತ್ಯವು. ಶ್ವೇತಕೇತುವೇ, ನೀನು ಅದೇ ಇರುವಿ. ಆದುದರಿಂದ ಮಗುವೇ, ಸಾಕ್ಷಾತ್ಕಾರವಾಗಲಿಕ್ಕಿಲ್ಲವೆಂದು ಗಾಬರಿಗೊಳ್ಳಬೇಡ. ಈ ಅಟ್ಟ ಅರಣ್ಯದೊಳಗಿಂದ ನೀಟಾದ ಹಾದಿಯನ್ನು ತೋರುವ ಗುರುವು ಪ್ರತಿಯೊಬ್ಬನಿಗೆ ಅನುಭವದ ಮುಖಾಂತರ ಇಂದಿಲ್ಲ ನಾಳೆ ಸಿಕ್ಕುವನು. ಅಂದಬಳಿಕ ಚಿಂತೆ

ಏಕೆ? ಆತ್ಮಜ್ಞಾನದಿಂದ ಪರಿಪೂತನಾದವನಿಗೆ ಯಾವ ಪಾಪವೂ ಇಲ್ಲ, ಯಾವ ಭಯವೂ ಇಲ್ಲ. ಅವನು ಆಪ್ತಕಾಮನಾಗಿ ಸದೈವ ಆನಂದದಲ್ಲಿ ಲೋಲಾಡುವನು.

'ಈಗ ನಾನು ಸಂಪೂರ್ಣ ಬ್ರಹ್ಮಜ್ಞಾನವನ್ನು ಹೇಳಿರುವೆನು. ಇನ್ನು ಇದನ್ನು ಸಾಕ್ಷಾತ್ಕರಿಸು, ಅಂದರೆ ನಿನ್ನ ಆಚರಣೆಯು ಜ್ಞಾನಪೂತವಾಗುವದು. ನಿನ್ನ ಕರ್ಮಗಳೆಲ್ಲ ಲೋಕಹಿತಕಾರಿಯಾಗುವವು ಮತ್ತು ನಿನಗೆ ಪೂರ್ಣ ಆನಂದವನ್ನುಂಟು ಮಾಡುವವು.' ಈ ಮಹತ್ವದ ಉಪದೇಶವನ್ನು ಕೇಳಿ ಶ್ವೇತಕೇತುವು ಪೂರ್ಣ ಸಮಾಧಾನಪಟ್ಟನು ಮತ್ತು ತನ್ನಲ್ಲಿ ನೆಲೆಸಿದ ದುರಭಿಮಾನಾದಿಗಳನ್ನು ಬಿಟ್ಟು ಗಂಭೀರವೃತ್ತಿಯಿಂದ ಆ ದಿವ್ಯಜ್ಞಾನದ ಸಾಕ್ಷಾತ್ಕಾರವನ್ನು ಅಳವಡಿಸಲು ಟೊಂಕಕಟ್ಟಿದನು.

ಇದೇ ಆರುಣೀ ವಿದ್ಯೆಯು, ಇದು ಮಹತ್ತ್ವವಾದದ್ದು. ಆತ್ಮಜ್ಞಾನ ರಹಸ್ಯವನ್ನು ಒಳಕೊಂಡದ್ದು.



## ೮. ಪರಾ ಅಪರಾ ವಿದ್ಯೆಗಳು

ವಾಡಿಕೆಯಾಗಿ ಎಲ್ಲ ವಿದ್ಯಾರ್ಥಿಗಳು ಇರುವಂತೆ ನಾರದನು ಹನ್ನೆರಡು ವರ್ಷ ಗುರುಗಳ ಆಶ್ರಮದಲ್ಲಿದ್ದು ಅನೇಕ ವಿದ್ಯೆಗಳಲ್ಲಿ ಪಾರಾಂಗತನಾದನು. ಆದರೆ ಅವನಿಗೆ ಆ ವಿದ್ಯೆಗಳಿಂದ ಸಮಾಧಾನವೆಂಬುದು ಉಂಟಾಗಲಿಲ್ಲ. ಆಗ ಅವನು ಅದರ ಕಾರಣವನ್ನು ಗುರುತಿಸಿ, 'ನನಗೆ ಮುಖ್ಯ ವಿದ್ಯೆಯನ್ನು ಕಲಿಸಿರಿ' ಎಂದು ಸನತ್ಕುಮಾರನ ಬಳಿಗೆ ಬಂದು ಆತ್ಮವಿದ್ಯೆಯ ಭಿಕ್ಷೆಯನ್ನು ಬೇಡಿದನು.

'ನೀನು ಇದುವರೆಗೆ ಯಾವ ವಿದ್ಯೆಗಳನ್ನು ಕಲಿತಿರುವಿ, ಅವನ್ನು ಮೊದಲು ವಿವರಿಸು, ಅಂದರೆ ಮುಂದೆ ನಾನು ನಿನಗೆ ವಿದ್ಯೆಯನ್ನು ಹೇಳುವೆನು' ಎಂದು ಸನತ್ಕುಮಾರನು ಆಶ್ವಾಸನ ಕೊಟ್ಟನು. ಆಗ ಕಲಿತ ಎಲ್ಲ ವಿದ್ಯೆಗಳ ವಿವರವನ್ನು ನಾರದನು ಅವನಿಗೆ ಹೇಳಿದನು. 'ಗುರುಗಳೇ, ನಾನು ಋಕ್, ಯಜುಸ್, ಸಾಮ ಮತ್ತು ಅಥರ್ವ ಎಂಬ ಚತುರ್ವೇದಗಳನ್ನು ಪಠಿಸಿರುವೆನು. ಪಂಚಮವೇದವೆಂದು ಪ್ರಸಿದ್ಧವಿರುವ ಇತಿಹಾಸ ಪುರಾಣಗಳನ್ನು

ಓದಿರುವೆನು. ಅದೇ ರೀತಿ ವ್ಯಾಕರಣ, ಶ್ರಾದ್ಧಕಲ್ಪ, ಗಣಿತ, ಉತ್ಪಾತವಿದ್ಯೆ, ನಿಧಿಶಾಸ್ತ್ರ, ತರ್ಕಶಾಸ್ತ್ರ, ನೀತಿ, ದೇವವಿದ್ಯೆ ಅಂದರೆ ನಿರುಕ್ತ, ಶಿಕ್ಷಾಕಲ್ಪಾದಿ ಬ್ರಹ್ಮವಿದ್ಯೆ, ಭೂತತಂತ್ರ, ಧನುರ್ವಿದ್ಯೆ, ಜ್ಯೋತಿಷ, ಗಾರುಡ, ಸಂಗೀತ ಈ ಮುಂತಾದ ವಿದ್ಯೆಗಳನ್ನು ಕಲಿತಿರುವೆನು. ಆದರೆ ಭಗವನ್, ಇದೆಲ್ಲ ಮಂತ್ರ ವಿದ್ಯೆ ಅಥವಾ ಶಬ್ದವಿದ್ಯೆಯೆನಿಸುವದು; ಇದರಲ್ಲಿ ಮನಸಿಗೆ ಅತ್ಯಂತ ಸಮಾಧಾನವನ್ನುಂಟುಮಾಡುವಂತಹದೇನೂ ಇಲ್ಲ. ಆತ್ಮಜ್ಞಾನದಿಂದಲೆ ನಿಜವಾದ ಶಾಂತಿಯು ದೊರಕುವದು ಎಂದು ಸುಜ್ಞರು ಹೇಳುವರು. ಆದುದರಿಂದ ಆ ವಿದ್ಯೆಗಾಗಿ ತಮ್ಮೆಡೆಗೆ ಬಂದಿರುವೆನು. ಅದನ್ನು ತಾವು ಕೃಪಾಪೂರ್ಣರಾಗಿ ದಯಪಾಲಿಸಬೇಕು' ಎಂದು ನಾರದನು ಕೈಜೋಡಿಸಿ ಸನತ್ಕುಮಾರನ ಎದುರಿಗೆ ನಿಂತನು.

ಇಷ್ಟೆಲ್ಲ ವಿದ್ಯಾವ್ಯಾಸಂಗ ಮಾಡಿದ್ದರೂ ಗರ್ವದಿಂದ ಉಬ್ಬಿಹೋಗದೆ ಇದ್ದ ಆ ನಾರದನನ್ನು ನೋಡಿ ಸನತ್ಕುಮಾರನಿಗೆ ಅಚ್ಚರಿಯಾಯಿತು, ಅವನ ಬಗ್ಗೆ ಮನಸಿನಲ್ಲಿ ಒಂದು ಬಗೆಯ ಪ್ರೇಮವುಂಟಾಯಿತು. ಅವನು ಅಂದದ್ದು, 'ನಾರದನೇ, ನೀನು ವಿದ್ಯಾರ್ಜನೆಗಾಗಿ ಮಾಡಿದ ದೀರ್ಘೋದ್ಯೋಗವು ನಿಜವಾಗಿ ಆಶ್ಚರ್ಯಜನಕವು. ಆದರೆ ಇದುವರೆಗೆ ನೀನು ಕಲಿತುದೆಲ್ಲ ನಾಮ ಮಾತ್ರವು, ನಾಮರೂಪಾತ್ಮಕ ನಶ್ವರಸೃಷ್ಟಿಗೆ ಸಂಬಂಧಿಸಿದ್ದು. ಇದರಾಚೆಗೆ ಹೋದ ವಿನಾ ಮನುಷ್ಯನಿಗೆ ಪರಮಪದವು ಪ್ರಾಪ್ತವಾಗಲರಿಯದು. ಬ್ರಹ್ಮ, ಆತ್ಮ, ಎಂಬುದೆ ಇದೆಲ್ಲದರ ಆಚೆಗಿದ್ದ ಪರವಸ್ತುವು.

'ಇನ್ನು ಹಲವರು ಈ ನಾಮರೂಪವೆ ಬ್ರಹ್ಮವೆಂದು, ಇದೇ ಎಲ್ಲಕ್ಕೂ ಶ್ರೇಷ್ಠವೆಂದು ಉಪಾಸಿಸುವರು. ಅವರಿಗೆ ಈ ಲೋಕದ ನಾಮರೂಪಗಳ ಮಟ್ಟಿಗೆ ಗತಿಯು ದೊರೆಯುವದು. ಅದರಾಚೆಗೆ ಅವರು ಹೋಗಲರಿಯರು. ಯಾಕೆಂದರೆ ಅವರು ಇದೇ ಬ್ರಹ್ಮವೆಂದು ನಂಬಿರುವರು. ಅವರ ಜೀವನವು ಬಾಹ್ಯತಃ ಒಳ್ಳೆ ಯಶಸ್ವಿಯಾಗಿರುವದು. ಆದರೆ ಆಂತರಿಕ ಆತ್ಮಾನಂದವನ್ನು ಅವರು ಅನುಭವಿಸಲಾರರು.'

ಇದನ್ನು ಕೇಳಿ ನಾರದನ ಕುತೂಹಲವು ಹೆಚ್ಚಿತು. ಅವನು ಕೇಳಿದ್ದೇನೆಂದರೆ, 'ಗುರುಗಳೇ, ಈ ನಾಮವಿದ್ಯೆಗಿಂತ ಹೆಚ್ಚಿನ ವಿದ್ಯೆಯನ್ನು ನನಗೆ ಹೇಳಿರಿ.'

ಶಿಷ್ಯನು ನಿಜವನ್ನರಿಯಲು ಉತ್ಸುಕನಿರುವನೆಂಬುದನ್ನು ನೋಡಿ

ಸನತ್ಕುಮಾರನು ಅಂದದ್ದು, ‘ಈ ನಾಮಕ್ಕಿಂತ ವಾಣಿಯು ಹೆಚ್ಚಿನದು, ವಾಣಿಯಿಂದಲೆ ನೀನು ವಿವರಿಸಿದ ವಿದ್ಯೆಗಳೆಲ್ಲ ಪ್ರಕಾಶಪಡೆಯುವವು, ವ್ಯಕ್ತವಾಗುವವು. ವಾಣಿಯಿಂದಲೆ ನಾವು ನಮಗೆ ಬೇಕಾದುದನ್ನು ಬೇಡಾದುದನ್ನು ತಿಳಿಸುವೆವು. ಆ ವಾಣಿಯು ಹೆಚ್ಚಿನದು, ಎಂದು ಉಪಾಸನೆ ಮಾಡುವವರು ವಾಣಿಯ ವಿಷಯಗಳಲ್ಲಿ ಪ್ರಭುತ್ವವನ್ನು ಪಡೆಯುವರು. ನೀನು ಮಾತ್ರ ವಾಣಿಯೆ ಹೆಚ್ಚಿನದೆಂದು ಬಗೆಯಬೇಡ. ಯಾಕಂದರೆ ನಾಮ ಮತ್ತು ವಾಣಿ ಇವೆರಡೂ ಒಂದೇ ಮನದಲ್ಲಿ ಇರುವವು. ಮನವೆ ಇವೆರಡಕ್ಕೂ ಹೆಚ್ಚಿನದು. ಮನಸ್ಸಿಗಿಂತ ಸಂಕಲ್ಪವು ಹೆಚ್ಚಿನದು. ಯಾಕಂದರೆ ಸಂಕಲ್ಪಶಕ್ತಿ ಇಲ್ಲದೆ, ಸಂಕಲ್ಪ ಮಾಡದೆ ಮನಸು ಏನೂ ಮಾಡಲಾರದು. ಸಂಕಲ್ಪ ಮಾಡಿದ ಬಳಿಕ ಮನಸು ವಾಣಿರೂಪದಿಂದ ವ್ಯಕ್ತವಾಗುವದು. ವಾಣಿಯಿಂದ ವ್ಯಕ್ತವಾದಂತೆ ಮುಂದೆ ಕರ್ಮವಾಗುವದು. ಹಾಗಾದರೆ ಸಂಕಲ್ಪವೆ ಹೆಚ್ಚಿನದೆನ್ನಬಹುದೋ, ಎಂದು ಕೇಳಿದರೆ ಹಾಗೂ ಅನ್ನಲಿಕ್ಕಾಗದು. ಯಾಕಂದರೆ ಚಿತ್ತದಲ್ಲಿ ಚೈತನ್ಯವು ಇದ್ದರೆ ಸಂಕಲ್ಪವು ಹುಟ್ಟಬಲ್ಲದು. ಇನ್ನು ಚಿತ್ತವು ಧ್ಯಾನಮಾಡುವದರಿಂದಲೇ ಶ್ರೇಷ್ಠವೆನಿಸುವದು. ಧ್ಯಾನಸಾಮರ್ಥ್ಯವುಳ್ಳವನೆ ಮಹತ್ವವನ್ನು ಪಡೆಯಬಲ್ಲನು. ಮಿಕ್ಕವರು ಕೇವಲ ಅದೂರದರ್ಶಿಗಳು, ಜಗಳಗಂಟರು, ಸಿಟ್ಟಿನವರು ಆಗಿ ನಾಶಹೊಂದುವರು. ಧ್ಯಾನಕ್ಕಾದರೂ ಸತ್ಯಜ್ಞಾನವೆ ಆಧಾರವು. ಸತ್ಯದ ಆಧಾರವಿಲ್ಲದ ಧ್ಯಾನವು ಮಣ್ಣುಪಾಲಾಗುವದು. ಇನ್ನು ಬರಿ ಸತ್ಯಜ್ಞಾನದಿಂದ ಬಗೆಹರಿಯುವದೇ? ಹಾಗೂ ಇಲ್ಲ. ಯಾಕಂದರೆ ನೂರಾರು ಜ್ಞಾನಿಗಳನ್ನು ಒಬ್ಬ ಬಲಿಷ್ಠನು ನಡುಗಿಸಬಲ್ಲನು. ಬಲವುಳ್ಳವನು ತನ್ನ ಬಲದ ಮೂಲಕ ಕರ್ಮ ಮಾಡಬಲ್ಲನು. ಗುರುಸೇವೆ ಮಾಡಿ ಜ್ಞಾನವನ್ನು ಪಡೆಯಬಲ್ಲನು. ಬಲವೆ ಎಲ್ಲ ಪ್ರಾಣಿಮಾತ್ರಗಳಿಗೆ ಆಧಾರವು. ಬಲಹೀನರಿಗೆ ಆತ್ಮಲಾಭವಾಗದು. ತಾತ್ಪರ್ಯವೇನಂದರೆ, ಬರಿಯ ಬೌದ್ಧಿಕ ಜ್ಞಾನವು ಸಾಕಾಗದು. ಅದನ್ನು ದೃಢಮನಸ್ಸಿನಿಂದ ಆಚರಿಸುವ ಸಾಮರ್ಥ್ಯವು ನಮ್ಮಲ್ಲಿ ಬೇಕು. ಇದೇ ಸತ್ಯಜ್ಞಾನವು. ಇದನ್ನರಿತವನು ‘ಅತಿವಾದಿ’ ಅಂದರೆ ಅತೀತ ವಸ್ತುವನ್ನು, ಅತೀತ ತತ್ವವನ್ನರಿತವನೆಂದು ಹೇಳಬಹುದು. ಇಂಥವನಿಗೆ ಯಾರಾದರೂ ನೀನು ಅತಿವಾದಿ ಎಂದರೆ ಅದನ್ನು ಅವನು ನಿರಾಕರಿಸಕೂಡದು, ಯಾಕಂದರೆ ಅವನು ನಿಜವಾಗಿ ಅತಿವಾದಿಯಿರುವನು, ಅತೀತಜ್ಞಾನವನ್ನು ಪಡೆದವನಿರುವನು.’

ನಾರದನು ಇದನೆಲ್ಲ ಏಕಚಿತ್ತದಿಂದ ಆಲಿಸುತಿದ್ದನು. ಇನ್ನು ಈ ಜ್ಞಾನವನ್ನು ಪಡೆಯುವ ಬಗೆ ಹೇಗೆ, ಎಂಬುದು ಎಲ್ಲಕ್ಕೂ ಮಹತ್ವದ ಪ್ರಶ್ನೆ. ಗುರುಗಳಿಗೆ ಅವನು ಆ ಬಗ್ಗೆ ಪ್ರಶ್ನೆ ಮಾಡಿದನು.

ಆಗ ಗುರುಗಳು ಅಂದದ್ದು, 'ಮನುಷ್ಯನು ಸತ್ಯವನ್ನರಿಯದೆ ಸತ್ಯವನ್ನರಿತಿರುವೆನೆಂದು ಅನ್ನಲಾಗದು. ವಿಚಾರ ಮಾಡುವವನೆ ಸತ್ಯವನ್ನರಿಯುವನು. ಶ್ರದ್ಧೆಯುಳ್ಳವನೆ ವಿಚಾರಿಸಬಲ್ಲನು. ಗುರುಸೇವಾದಿ ಮಾಡುವ ನಿಷ್ಠಾವಂತನಲ್ಲಿಯೆ ಶ್ರದ್ಧೆಯು ಉತ್ಪನ್ನವಾಗಬಲ್ಲದು. ಸಂಯಮ, ಏಕಾಗ್ರತೆ, ಬ್ರಹ್ಮಚರ್ಯ ಈ ಮೊದಲಾದ ವ್ರತಗಳನ್ನು ಪಾಲಿಸುವವನೆ ನಿಷ್ಠಾವಂತನಾಗುವನು. ತನಗೆ ಶಾಶ್ವತ ಸುಖವು ದೊರೆಯಬೇಕು, ಎಂಬ ಹಸಿವು ಹುಟ್ಟಿದ ಮನುಷ್ಯನೆ ಕಷ್ಟಪಡಲು ಸಿದ್ಧನಾಗುವನು. ಆ ಶಾಶ್ವತ ಸುಖದ ದರ್ಶನವೆ ಎಲ್ಲ ಪ್ರಯತ್ನಗಳಿಗೂ ಮೂಲ. ಸಾಮಾನ್ಯವಾಗಿ ಮನುಷ್ಯನು ತಾತ್ಕಾಲಿಕ, ಕ್ಷಣಿಕ, ಭಂಗುರವಾದ ವಿಷಯಸುಖಗಳನ್ನೆ ಅಪೇಕ್ಷಿಸಿ, ಅವುಗಳನ್ನೆ ಪಡೆಯುವ ಯತ್ನಮಾಡಿ ಅವುಗಳಲ್ಲಿಯೆ ಮಗ್ನನಿರುವನು. ಆದರೆ ಅವುಗಳಿಂದ ಶಾಶ್ವತಸುಖವು ದೊರೆಕೊಳ್ಳದು.'

ನಾರದನು ಸಾಮಾನ್ಯ ಸುಖಗಳ ನಶ್ವರತೆಯನ್ನು ಕಂಡುಹಿಡಿದು ಅವುಗಳನ್ನು ತ್ಯಜಿಸಿ ಶಾಶ್ವತಸುಖದ ಅಭಿಲಾಷಿಯಾಗಿದ್ದನು. ಎಲ್ಲ ಮಂತ್ರವಿದ್ಯೆಗಳನ್ನು ಕಲಿತು ಅವುಗಳಲ್ಲಿ ಪ್ರಭುತ್ವಪಡೆದಿದ್ದರೂ ಅವನಿಗೆ ಅವುಗಳಲ್ಲಿ ಸುಖವು—ಶಾಶ್ವತಸುಖವು ಪ್ರಾಪ್ತವಾಗಿರಲಿಲ್ಲ. ಅವನಿಗೆ ಅವೆಲ್ಲವುಗಳಿಂದ ಶಾಂತಿಯು ಪ್ರಾಪ್ತವಾಗಲಿಲ್ಲ. ಅವನು ಶೋಕಾತೀತನಾಗಬೇಕೆಂದು ಈಗ ಸನತ್ಕುಮಾರನ ಬಳಿಗೆ ಬಂದಿದ್ದನು. ಆದುದರಿಂದ ಅವನು ಅಂದದ್ದು, 'ಸ್ವಾಮಿನ್, ಆ ಸುಖವು, ಆ ನಿರತಿಶಯ ಸುಖವು ಹೇಗಿರುವದು, ಅದನ್ನು ನನಗೆ ಚನ್ನಾಗಿ ತಿಳಿಸಬೇಕು.'

ಶಿಷ್ಯನೋಪಾದಿಯಲ್ಲಿ ಜ್ಞಾನವನ್ನರಸುತ್ತ ತನ್ನೆಡೆಗೆ ಬಂದ ನಾರದನ ಜ್ಞಾನಾತುರವನ್ನು ಕಂಡು ಸನತ್ಕುಮಾರನು ಅವನಿಗೆ ಸುಖಸ್ವರೂಪವನ್ನೂ ಆತ್ಮಜ್ಞಾನವನ್ನೂ ಹೇಳಿದನು. 'ನಾರದನೇ, ನಿರತಿಶಯ ವಿಪುಲತನ, ಅತ್ಯಂತ ಹೇರಳ, ಅನಂತ, ಎಂಬುದೆ ಸುಖವು. ಅದಕ್ಕೆಯೆ 'ಭೂಮನ್' ಎಂದೆನ್ನುವರು. ಯಾವುದು ಅಲ್ಪವೊ ಮರ್ಯಾದಿತವೊ ಅದು ದುಃಖದ ಮೂಲವು. ಇನ್ನೂ ಬೇಕು, ಎಂಬುದೆ ದುಃಖ; ಏನೂ ಬೇಡ—ಎಲ್ಲವೂ ಇದೆ,

ಎಂಬ ಪೂರ್ಣ ಸಂತೃಪ್ತಿಯೆ ಸುಖ. ಈ ಭಾವವು ಅಂತಃಕರಣದಲ್ಲಿ ನೆಲೆಗೊಂಡಿತೆಂದರೆ ಅದೇ ಶಾಶ್ವತ ಸುಖವು. ಕಾಮರಹಿತ, ನಿಷ್ಕಾಮ, ಆಕಾಮ ಸ್ಥಿತಿಯೆ, ಅನಾಸಕ್ತ ಸ್ಥಿತಿಯೇ ನಿರತಿಶಯ ಸುಖಸ್ಥಿತಿಯು. ಏಕಾತ್ಮನನ್ನು ಅರಿತು ಅಂಥ ಸ್ಥಿತಿಯಲ್ಲಿ ಇದ್ದರೆ ನಮಗೆ ಎರಡನೆಯದೆಂಬುದು ಕಾಣುವದಿಲ್ಲ, ಕೇಳಿಸುವದಿಲ್ಲ, ತಿಳಿಯುವದಿಲ್ಲ. ಅದೇ ಅಮೃತವು. ಅದಕ್ಕೆ ಎರಡನೆಯ ಯಾವ ಆಧಾರವೂ ಬೇಡ. ಎರಡನೆಯ ಯಾವ ಅವಲಂಬನವೂ ಬೇಡ. ಸಾಮಾನ್ಯರು ವನಕರುಗಳಿಂದ, ಧನಕನಕಗಳಿಂದ, ಹೆಣ್ಣುಮಣ್ಣುಗಳ ಒಡೆತನದಿಂದ, ಸುಖವಾಗುವದೆಂದು ಹೇಳುವರು. ಆದರೆ ಅದು ನಿಜವಾದ, ಸ್ಥಿರವಾದ ಸುಖವಲ್ಲ. ಯಾಕಂದರೆ ಅಲ್ಲಿ ಎರಡನೆಯದೆಂಬುದು ಇರುವದು, ತನ್ನನ್ನು ಬಿಟ್ಟು ಅಲ್ಲಿ ಎರಡನೆಯವರ ಮೇಲೆ ಅವಲಂಬನವಿರುವದು. ಅಂಥ ಪರಾವಲಂಬನವು ಎಂದೂ ಸುಖಕಾರಕವಾಗಲಾರದು, ಅದು ನಿತ್ಯಸುಖವನ್ನು ಕೊಡಲರಿಯದು.'

'ಇಂಥ ಸುಖವು ಯಾವ ಸಾಧನದಿಂದ ಅಳವಡುವದು?' ಎಂದು ನಾರದನು ಮತ್ತೆ ಕೇಳಿದನು.

ಆಗ ಸನತ್ಕುಮಾರನು ಅಂದದ್ದು, 'ತನ್ನನ್ನು ತಾನರಿಯುವದರಿಂದಲೆ ಈ ಸುಖವು ಕೈಸೇರುವದು, ಅರ್ಥಾತ್ ಆತ್ಮಜ್ಞಾನವೆ ಇದರ ಸಾಧನವು. ಆ ಆತ್ಮವೆಂಬುದು ಮೇಲೆ ಕೆಳಗೆ, ಹಿಂದೆ ಮುಂದೆ, ದಕ್ಷಿಣಕ್ಕೆ ಉತ್ತರಕ್ಕೆ, ಪೂರ್ವಕ್ಕೆ ಪಶ್ಚಿಮಕ್ಕೆ ಎಲ್ಲೆಲ್ಲಿಯೂ ಪಸರಿಸಿರುವದು. ಇದೆಲ್ಲವೂ ಆ ಆತ್ಮವು. ಇದನ್ನರಿತವನು ಆತ್ಮನಲ್ಲಿ ರತನಾಗುವನು. ಆತ್ಮನಲ್ಲಿಯೆ ಲೀಲಾ ವಿಹಾರಮಾಡುವನು. ಆತ್ಮನೆ ಅವನ ಜೊತೆಗಾರನು. ಆತ್ಮಾನಂದದಲ್ಲಿಯೆ ಅವನು ಓಲಾಡುವನು. ಅವನು ಸ್ವರಾಟ್‌ನು, ಸ್ವತಂತ್ರನು. ಅವನು ತನಗೆ ಇಷ್ಟವಾದ ಲೋಕಗಳಲ್ಲಿ ಸ್ವೇಚ್ಛೆಯಿಂದ ಸಂಚರಿಸಬಲ್ಲನು. ಈ ಜ್ಞಾನವಿಲ್ಲದವನು ಮಾತ್ರ ಪಾಡ, ಪರವಶನಾಗಿ ದುಃಖದಲ್ಲಿ ತೊಳಲಾಡುವನು. ಅವನ ಸುಖವು ಭಂಗುರವು, ಅಲ್ಪವು.

'ಯಾವ ಆತ್ಮನ ಜ್ಞಾನದಿಂದ ಈ ನಿರತಿಶಯ ಸುಖವು ಪ್ರಾಪ್ತವಾಗುವದೊ ಆ ಆತ್ಮನಿಂದಲೆ ಈ ಪ್ರಾಣಾದಿಗಳು, ಸಂಕಲ್ಪಾದಿಗಳು, ಆಕಾಶಾದಿಗಳು ಹುಟ್ಟಿರುವವು. ಆ ಆತ್ಮನೆ ತಾನು ಒಂದೇ ಒಂದು ಇದ್ದವನು ಅನೇಕ ವಿಧವಾಗಿ ಆವಿರ್ಭವಿಸಿರುವನು. ಇದೆಲ್ಲವೂ ಅವನಿಂದ ವ್ಯಾಪ್ತವು, ಅವನಿಂದ ಸ್ಥಿತವು, ಅವನಲ್ಲಿ ಆಶ್ರಿತವು.

'ಆ ಸೂಕ್ಷ್ಮ ಸರ್ವವ್ಯಾಪಿ, ಏಕಮೇವಾದ್ವಿತೀಯವಾದ ಆತ್ಮನನ್ನು ನಾವು ನಿಷ್ಕಾಮರಾಗಿ, ಸ್ಥಿತಪ್ರಜ್ಞರಾಗಿ, ಸ್ಥಿರಚಿತ್ತರಾಗಿ, ಧ್ಯಾನಮಗ್ನರಾಗಿ, ಶುದ್ಧ ಚಿತ್ತರಾಗಿ, ಅನಾಸಕ್ತರಾಗಿ ಪಡೆಯತಕ್ಕದ್ದು. ಆಹಾರಶುದ್ಧಿಯಿಲ್ಲದೆ ಚಿತ್ತ ಶುದ್ಧಿಯಾಗದು, ನಮ್ಮ ಭಾವನಾದಿಗಳು ಶುದ್ಧವಾಗವು. ನಮ್ಮ ಚಿತ್ತ, ನಮ್ಮ ಭಾವನೆ ಶುದ್ಧವಾಯಿತೆಂದರೆ ನಮ್ಮ ಸ್ಮೃತಿಯು ದೃಢವಾಗಿ ಮನಸು ಏಕಾಗ್ರವಾಗುವದು. ಮನಸು ಏಕಾಗ್ರವಾಯಿತೆಂದರೆ ಎಲ್ಲ ಸಂಶಯಗಳ ಪರಿಹಾರವಾಗಿ ನಿಚ್ಚಳವಾದ ಜ್ಞಾನಜ್ಯೋತಿಯು ಅಂತಃಕರಣದಲ್ಲಿ ಬೆಳಗು ವದು, ಸ್ಪಷ್ಟವಾದ ಆತ್ಮನ ಜ್ಞಾನವಾಗುವದು. ಈ ಪರಿ ಜ್ಞಾನವಾದವನು ಮೇಲೆ ಹೇಳಿದಂತೆ ಶಾಶ್ವತಸುಖದಲ್ಲಿ ವಿಹರಿಸುವನು. ಅವನ ಶಕ್ತಿಗಳೆಲ್ಲ ಸರ್ವಭೂತಹಿತ ಮಾಡುವದರಲ್ಲಿ ನಿಮಗ್ನವಾಗುವವು.'

ಅನೇಕ ವಿದ್ಯೆಗಳನ್ನು ಕಲಿತು ವಿದ್ಯಾರಣ್ಯನಾದರೂ ನಾರದನಿಗೆ ಅತ್ಯಂತ ಸಮಾಧಾನವೆಂಬುದು ಆಗಿರಲಿಲ್ಲ. ಈಗ ಸನತ್ಕುಮಾರನಿಂದ ಆತ್ಮವಿದ್ಯೆ ಯನ್ನು ತಿಳಿದುಕೊಂಡ ಬಳಿಕ ಆವನಿಗೆ ನಿಜವಾದ ಸಮಾಧಾನವಾಯಿತು. ಆ ಕ್ಷಣದಿಂದಲೆ ಅವನು ಆ ಜ್ಞಾನಸಾಕ್ಷಾತ್ಕಾರವನ್ನು ಪಡೆಯಲು ಉದ್ಯುಕ್ತ ನಾದನು. ಆತ್ಮಜ್ಞಾನವೆ ರಾಜವಿದ್ಯೆಯು, ಅದೇ ಮುಖ್ಯ ಜ್ಞಾನವು, ಅದೇ ಪರಾತ್ಪರ ವಸ್ತುವು ಎಂಬುದನ್ನು ಅವನು ಮನಗಂಡನು.

## ೯. ದೈವೀ ಹಾಗೂ ಆಸುರೀ ಜ್ಞಾನ

'ಆತ್ಮನು ಸಕಲ ಪಾಪಗಳಾಚೆಗಿದ್ದವನು, ಜರಾಮರಣರಹಿತನು, ಹಸಿವೆ ನೀರಡಿಕೆಗಳಿಲ್ಲದವನು, ಸತ್ಯಕಾಮನು, ಸತ್ಯಸಂಕಲ್ಪನು. ಅವನನ್ನು ಅಂತರ ದಲ್ಲಿ ಆರಸಿ ಅರಿತುಕೊಳ್ಳಬೇಕು. ಹೀಗೆ ಅರಿತುಕೊಂಡವನು ಎಲ್ಲ ಲೋಕ ಗಳನ್ನು ಪಡೆಯುವನು, ಎಲ್ಲ ಕಾಮನೆಗಳ ಫಲಗಳನ್ನು ಪಡೆಯುವನು' ಎಂದು ಪ್ರಜಾಪತಿಯು ನುಡಿದನು.

ಪ್ರಜಾಪತಿಯು ಮಹಾಜ್ಞಾನಿಯೆಂಬ ಸಂಗತಿಯನ್ನು ದೇವಾಸುರರು ತಿಳಿದುಕೊಂಡರು. ಆಗ ದೇವತೆಗಳಲ್ಲಿ ಇಂದ್ರನು, ಅಸುರರಲ್ಲಿ ವಿರೋಚನನು,

ಆತ್ಮಜ್ಞಾನವನ್ನು ಪಡೆಯಲಿಚ್ಛಿಸಿ ಪ್ರಜಾಪತಿಯ ಬಳಿಗೆ ಹೋದರು. ಶಿಷ್ಯ-ರೋಪಾದಿಯಲ್ಲಿ ಅವರು ಅವನ ಹತ್ತರ ಮೂವತ್ತೆರಡು ವರ್ಷ ಬ್ರಹ್ಮಚರ್ಯ ವ್ರತದಿಂದ ಇದ್ದರು. ಆ ಬಳಿಕ ಪ್ರಜಾಪತಿಯು ಅವರನ್ನು ಒಂದು ದಿನ ಕೇಳಿದ್ದೇನಂದರೆ, 'ನೀವಿಬ್ಬರೂ ಇಷ್ಟೊಂದು ನಿಷ್ಠೆಯಿಂದ ಇಲ್ಲಿ ಯಾವ ಉದ್ದೇಶದಿಂದ ಇರುವಿರಿ? ಅದನ್ನು ಮನಬಿಚ್ಚಿ ನನಗೆ ಈಗ ಹೇಳಿರಿ. ಸಾಧ್ಯ ವಿದ್ದರೆ ನಿಮ್ಮ ಮನದಿಚ್ಛೆಯನ್ನು ನಾನು ಪೂರೈಸುವೆನು.'

ಈ ಸುಪ್ರಸಂಗವು ಯಾವಾಗ ಬರುವದು, ಗುರುಗಳು ತಮ್ಮ ಕಡೆಗೆ ಯಾವಾಗ ನೋಡುವರು, ಎಂದು ತಾಳ್ಮೆಯಿಂದ ಆ ಕ್ಷಣದ ಪ್ರತೀಕ್ಷೆ ಮಾಡು ತಿದ್ದ ಇಂದ್ರ-ವಿರೋಚನರು ಮೇಲಿನ ಪ್ರಶ್ನೆಯನ್ನು ಕೇಳಿ ತಮ್ಮ ಬಯಕೆ ಯನ್ನು ಪ್ರಜಾಪತಿಗೆ ಹೇಳಿದರು. 'ಯಾವ ಆತ್ಮಜ್ಞಾನವನ್ನು ಪಡೆದರೆ ಮನುಷ್ಯನು ಸರ್ವಸಂಕಲ್ಪಗಳ ಕೊನೆಯನ್ನು ಮುಟ್ಟುವನೊ ಆ ಜ್ಞಾನವು ನಮಗೆ ಬೇಕಾಗಿದೆ' ಎಂದು ಅವರಿಬ್ಬರೂ ವಿನಮ್ರಭಾವದಿಂದ ನುಡಿದರು.

ಪ್ರಜಾಪತಿಯು ಕೂಡಲೆ ಅಂದದ್ದು, 'ಕಣ್ಣಿನಲ್ಲಿ ಕಾಣುವ ಪುರುಷನೆ ಆತ್ಮನು. ಅವನೇ ಅಮೃತನು, ಅಭಯನು, ಅವನೇ ಬ್ರಹ್ಮನು. ಅವನೇ ಕನ್ನಡಿಯಲ್ಲಿ ಮತ್ತು ನೀರಿನಲ್ಲಿ ಪ್ರತಿಬಿಂಬರೂಪದಿಂದ ಕಾಣುವನು. ನೀವಿ-ಬ್ಬರೂ ಆ ಅಕ್ಷಿಪುರುಷನನ್ನು ನೀರಿನಲ್ಲಿ ನೋಡಿ ಏನು ಕಾಣುವದು ಎಂಬುದನ್ನು ನನಗೆ ಹೇಳಿರಿ.' ಇದನ್ನು ಕೇಳಿ ಅವರಿಬ್ಬರೂ ಮಾರನೆ ದಿನ ತಮ್ಮ ಪ್ರತಿ ಬಿಂಬವನ್ನು ನೀರಿನಲ್ಲಿ ನೋಡಿದರು, ಮತ್ತು ಕಾಲುಗುದಿಯಿಂದ ತಲೆಯವರೆಗೆ ಇಡೀ ಶರೀರವು ನೀರಿನಲ್ಲಿ ಕಾಣುವದು, ಎಂದು ಪ್ರಜಾಪತಿಗೆ ಹೇಳಿದರು. ಪ್ರಜಾಪತಿಯು ಆಗ ಅವರಿಗೆ ಮತ್ತೆ ಅಂದದ್ದು, 'ನೀವು ಒಳ್ಳೆ ಅಲಂಕಾರ ಗಳಿಂದ ಭೂಷಿತರಾಗಿ ಸುಂದರವಾದ ಬಟ್ಟೆಗಳನುಟ್ಟು ಸ್ವಚ್ಛವಾಗಿ ತಲೆ ಮಾಡಿಸಿಕೊಂಡು ತಿಳಿನೀರಿನಲ್ಲಿ ನೋಡುವಂಥವರಾಗಿರಿ.' ಇಂದ್ರ-ವಿರೋ-ಚನರು ಪ್ರಜಾಪತಿಯ ಹೇಳಿಕೆಯ ಮೇರೆಗೆ ಮಾಡಿದರು. 'ನಾವು ನೀರಿನಲ್ಲಿ ಸುವಸನಗಳನುಟ್ಟವರೂ ಉತ್ತಮ ಆಲಂಕಾರಗಳನ್ನು ತೊಟ್ಟವರೂ ಕಾಣು ವೆವು,' ಎಂದು ಪ್ರಜಾಪತಿಗೆ ಹೇಳಿದರು. 'ಅದೇ ಆತ್ಮವು, ಬ್ರಹ್ಮವು, ಅದೇ ಅಮೃತವು' ಎಂದು ಪ್ರಜಾಪತಿಯು ನುಡಿದನು. ಅದನ್ನು ಕೇಳಿ ಸಮಾಧಾನ ಪಟ್ಟು ಅವರು ಅಲ್ಲಿಂದ ತೆರಳಿದರು.

ಪ್ರಜಾಪತಿಯು ಅವರಿಗೆ ಹೀಗೆ ಹೇಳಿದ್ದು ಅವರ ಪರೀಕ್ಷೆಗಾಗಿ. ಅವರು

ಇಷ್ಟರಿಂದಲೆ ಸಂತುಷ್ಟರಾದರೆ, ಈ ಛಾಯಾಪುರುಷನೆ ಆತ್ಮನೆಂದು ತಿಳಿದರೆ, ಅವರು ತಮ್ಮ ಶರೀರವೆ ಎಲ್ಲಕ್ಕೂ ಹೆಚ್ಚಿನದು, ಅದೇ ಆತ್ಮವು ಎಂದು ಭ್ರಾಂತಿಗೊಂಡು ಆತ್ಮಜ್ಞಾನವನ್ನು ಪಡೆಯದೆ ನಾಶಹೊಂದುವರು, ಎಂಬುದು ಅವನಿಗೆ ಗೊತ್ತಿತ್ತು. ಪ್ರಜಾಪತಿಯು ಊಹಿಸಿದಂತೆಯೆ ವಿರೋಚನನು ಪೂರ್ಣ ಸಂತುಷ್ಟನಾಗಿ ಅಸುರರ ಬಳಿಗೆ ಹೋಗಿ ಉಬ್ಬಿನಿಂದ, 'ನಾನು ಬ್ರಹ್ಮಜ್ಞಾನವನ್ನು ಪಡೆದು ಬಂದಿರುವೆನು, ಈ ಶರೀರವೆ ಆತ್ಮವು, ಈ ಛಾಯಾಪುರುಷನೆ ಆತ್ಮನು,' ಎಂದು ಹೇಳಿದನು. ಆದುದರಿಂದ ಈಗ್ಯೂ ಅಸುರರು ನಿಜವಾದ ಆತ್ಮನನ್ನು ಅರಿಯದೆ ಹೋಗಿರುವರು. ಶ್ರದ್ಧೆ, ದಾನ, ಯಜ್ಞಾದಿಗಳಿಂದ ರಹಿತರಿದ್ದವರೆಲ್ಲ ಅಸುರರೆಂದೆನಿಸಿಕೊಳ್ಳುವರು. ಅವರು ಅತ್ಯಂತ ಸ್ವಾರ್ಥಿಗಳು ಮತ್ತು ಇಂದ್ರಿಯಸುಖಲೋಲುಪರು. ಈ ನಶ್ವರ ದೇಹವೆ ಆತ್ಮವೆಂದು ಅವರು ಭಾವಿಸುವರು. ತಮ್ಮ ಕಡೆಗೆ ಹಣವಿಲ್ಲದಿದ್ದರೂ ಕಡತಂದು, ಭಿಕ್ಷೆಬೇಡಿಯಾದರೂ ಹೆಣವನ್ನು ಶೃಂಗರಿಸುವರು, ಮತ್ತು ಈ ರೀತಿ ಮಾಡಿದರೆ ಪರಲೋಕವು ಪ್ರಾಪ್ತವಾಗುವದೆಂದು ತಿಳಿಯುವರು!

ಇಂದ್ರನು ಮಾತ್ರ ಈ ತಪ್ಪನ್ನು ಮಾಡಲಿಲ್ಲ. ಅವನು ಆಗಿನ ಮಟ್ಟಿಗೆ ಸಮಾಧಾನಪಟ್ಟಂತೆ ತೋರಿದರೂ ದೇವತೆಗಳ ಬಳಿಗೆ ಹೋಗಿ ಮುಟ್ಟುವಷ್ಟರಲ್ಲಿ ಅವನು ಪ್ರಜಾಪತಿಯು ಹೇಳಿದ ಜ್ಞಾನದ ಬಗ್ಗೆ ಸಂಶಯವುಳ್ಳವನಾದನು. ಅದು ನಿಜವಾದ ಜ್ಞಾನವಲ್ಲವೆಂದು ಅವನಿಗೆ ಎನಿಸಿತು. ಯಾಕಂದರೆ ಶರೀರವಿದ್ದಂತೆ ಛಾಯೆಯಿರುವದು, ಶರೀರದಲ್ಲಿ ಪರಿವರ್ತನಗಳಾದಂತೆ ಆ ಛಾಯೆಯಲ್ಲಿಯೂ ಬದಲಾಗುವದು. ಶರೀರವು ಕೈಯಿಲ್ಲದ್ದು ಅಥವಾ ಕುಂಟ ಆದರೆ ಛಾಯೆಯೂ ಹಾಗೆ ಆಗುವದು. ಅಂದಬಳಿಕ ಅದು ಚಿರಸ್ಥಿರ ಏಕರೂಪ ಆತ್ಮವಲ್ಲ ಎಂದು ಪುನಃ ಸಮಿತ್ಪಾಣಿಯಾಗಿ, ಶಿಷ್ಯನಾಗಿ ಪ್ರಜಾಪತಿಯ ಬಳಿಗೆ ಹೋದನು. 'ಗುರುಗಳೇ, ನೀವು ಹೇಳಿದ ಜ್ಞಾನವು ನನಗೆ ಸಂತೋಷವನ್ನು ಕೊಡಲರಿಯದು. ಅದರಲ್ಲಿ ಏನೂ ತಥ್ಯವಿಲ್ಲ. ಆದುದರಿಂದ ನನಗೆ ನಿಜವಾದ ಆತ್ಮಜ್ಞಾನವನ್ನು ಹೇಳಬೇಕು,' ಎಂದು ಬೇಡಿಕೊಂಡನು. ಆಗ ಪ್ರಜಾಪತಿಯು ಅವನಿಗೆ ಮತ್ತೆ ಮೂವತ್ತೆರಡು ವರ್ಷ ತನ್ನ ಬಳಿ ಇರಹೇಳಿದನು.

ಆ ಬಳಿಕ ಒಂದು ದಿನ ಇಂದ್ರನನ್ನು ಹತ್ತರ ಕೂಡಿಸಿಕೊಂಡು ಪ್ರಜಾಪತಿಯು ಅಂದದ್ದು, 'ಸ್ವಪ್ನದಲ್ಲಿ ವಿಹರಿಸುವ ಚೈತನ್ಯವೆ ಆತ್ಮವು. ಅದೇ

ಅಮೃತವು, ಅಭಯವು, ಬ್ರಹ್ಮವು.' ಪ್ರಜಾಪತಿಯಂಥವನು ಇದೇ ಸತ್ಯವೆಂದು ಹೇಳಿದ ಬಳಿಕ ಅದು ಸುಳ್ಳೆನ್ನುವ ಬಗೆ ಹೇಗೆ? ಆದುದರಿಂದ ನಿಜವಾದ ಸಮಾಧಾನವನ್ನು ಪಡೆಯದಿದ್ದರೂ ಸಂತುಷ್ಟನಾದವನಂತೆ ಇಂದ್ರನು ಅಲ್ಲಿಂದ ಹೊರಟುಹೋದನು. ಆದರೆ ಅವನ ಸಂತೋಷವು ಬಹಳ ಹೊತ್ತು ತಡೆಯಲಿಲ್ಲ. ಯಾಕಂದರೆ ದೇವತೆಗಳ ಕಡೆಗೆ ಹೋಗುವಷ್ಟರಲ್ಲಿ ಮತ್ತೆ ಅವನಿಗೆ ಸಂಶಯ ವುಂಟಾಯಿತು. 'ಶರೀರಕ್ಕೆ ಆಗುವ ಆಧಿವ್ಯಾಧಿಗಳಿಂದ, ಶರೀರಕ್ಕೆ ಉಂಟಾ ಗುವ ಕುಂದುಗಳಿಂದ ಸ್ವಪ್ನಾತ್ಮನು ಕೆಡುವದಿಲ್ಲವೆಂಬುದೇನೋ ನಿಜವು. ಶರೀರವು ಕುರುಡಾದರೂ ಸ್ವಪ್ನಾತ್ಮನು ಕುರುಡನಾಗುವದಿಲ್ಲ. ಆದರೆ ಸ್ವಪ್ನದಲ್ಲಿ ಈ ಸ್ವಪ್ನಾತ್ಮನನ್ನು ಎಷ್ಟೋಸಾರೆ ಯಾರೋ ಹೊಡೆದಂತೆ ಬಡಿದಂತೆ, ಇವನು ದುಃಖದಿಂದ ಕೊರಗುವಂತೆ ಮರಗುವಂತೆ, ಅನುಭವವಾಗುವದು. ಅಂದಬಳಿಕ ಇವನು ಅಮೃತನೂ ಅಶೋಕನೂ ಆದ ಆತ್ಮನು ಇರಲಾರನು. ಇವನು ಸತ್ಯಾತ್ಮ ನಲ್ಲ' ಎಂದು ವಿಚಾರಮಾಡಿ ಇಂದ್ರನು ಪುನಃ ಗುರುಗಳೆಡೆಗೆ ಹೋದನು.

'ಗುರುಗಳೇ, ನೀವು ಹೇಳಿದ ಸ್ವಪ್ನಾತ್ಮನ ಜ್ಞಾನದಿಂದ ನಾನು ಪರಿತುಷ್ಟ ನಾಗಲರಿಯೆನು. ಯಾಕಂದರೆ, ಅವನು ಶೋಕಮೋಹಗಳಿಗೆ ಒಳಗಾದವ ನಾದುದರಿಂದ ಆತ್ಮನಲ್ಲ. ನನಗೆ ಸತ್ಯಜ್ಞಾನವನ್ನು ಸುರಬೇಕು' ಎಂದು ಪ್ರಜಾಪತಿಗೆ ಕೇಳಿಕೊಂಡನು. ಆಗ ಪ್ರಜಾಪತಿಯು ಇಂದ್ರನಿಗೆ ಪುನಃ ಮೂವತ್ತೆರಡು ವರ್ಷ ಇರಹೇಳಿದನು. ಆ ಅವಧಿಯಾದ ನಂತರ ಪ್ರಜಾ ಪತಿಯು ಇಂದ್ರನನ್ನು ಕರೆದು, 'ನಿದ್ರೆಯಲ್ಲಿರುವ ಚೈತನ್ಯವೆ ಆತ್ಮವು. ಆ ಅವಸ್ಥೆಯಲ್ಲಿ ಆತ್ಮವು ಪ್ರಸನ್ನವಿರುವದು, ಯಾವ ಕನಸುಗಳಿಂದಲೂ ಅದು ಆಗ ವ್ಯಥೆಪಡಬೇಕಾಗಿಲ್ಲ. ಅವನೇ ಅಮೃತನು, ಅಭಯನು, ಬ್ರಹ್ಮನು' ಎಂದು ಹೇಳಿದನು. ಈ ಸಾರೆ ಗುರುಗಳು ಹೇಳಿದ ಜ್ಞಾನವು ನಿಜವಿರಬಹು ದೆಂದು ಇಂದ್ರನಿಗೆ ತೋರಿ ಅವನು ಸಂತುಷ್ಟನಾಗಿ ಹೋದನು. ಆದರೆ ನಡು ಹಾದಿಗೆ ಹೋಗುವಷ್ಟರಲ್ಲಿ ಅವನ ಮನಸ್ಸಿನಲ್ಲಿ ಪುನಃ ಪುನಃ ಸಂಶಯವು ಬಂದಿತು. ಸುಷುಪ್ತಿಯಲ್ಲಿ ಚೈತನ್ಯವು ಸ್ವಪ್ನಾದಿಗಳಿಂದ ಮುಕ್ತವಿರುವ ದೇನೋ ನಿಜವು, ಆದರೆ ಅದಕ್ಕೆ ಆಗ ಯಾವ ಎಚ್ಚರವೇ ಇರುವದಿಲ್ಲ. ತನ್ನ ಅಥವಾ ಪರರ ಜ್ಞಾನವೆ ಅದಕ್ಕೆ ಆಗ ಆಗುವದಿಲ್ಲ. ಅಂದಮೇಲೆ ಅದು ಆಗ ಅಮೃತ ಚಿದಾತ್ಮಕ ಆತ್ಮವೆನಿಸುವ ಬಗೆ ಹೇಗೆ? ಎಂದು ಸಂಶಯಬಟ್ಟು ಇಂದ್ರನು ಮರಳಿ ಪ್ರಜಾಪತಿಯ ಬಳಿಗೆ ಬಂದನು.

ತನ್ನ ಶಿಷ್ಯನ ಸೂಕ್ಷ್ಮಬುದ್ಧಿ, ನಿರೀಕ್ಷಣಶಕ್ತಿ ಮತ್ತು ಉತ್ಕಟ ಜಿಜ್ಞಾಸೆ ಇವುಗಳನ್ನು ನೋಡಿ ಯೋಗ್ಯ ಶಿಷ್ಯನು ದೊರೆತನೆಂದು ಪ್ರಜಾಪತಿಗೆ ಆನಂದ ವಾಯಿತು. ಇನ್ನು ನಿಜವಾದ ಆತ್ಮಸ್ವರೂಪದ ಜ್ಞಾನವನ್ನು ಹೇಳಿದ ಹೊರತು ಇವನು ತನ್ನ ಬೆನ್ನು ಬಿಡುವವನಲ್ಲವೆಂಬುದು ಅವನಿಗೆ ಗೊತ್ತಾಯಿತು. ಅದು ದರಿಂದ ಪ್ರಜಾಪತಿಯು ಅಂದದ್ದು, 'ಪ್ರಿಯ ಶಿಷ್ಯನೇ, ನಾನು ನಿನ್ನನ್ನು ಈಗ ಸಾಕಷ್ಟು ಪರೀಕ್ಷಿಸಿರುವೆನು. ನೀನು ನಿಜವಾದ ಜಿಜ್ಞಾಸುವಿರುವಿ. ನಿನ್ನ ನಿಷ್ಠೆಭಾವಗಳು ಅವರ್ಣನೀಯವಿರುವವು. ಇನ್ನೈದು ವರ್ಷ ಇಲ್ಲಿ ಇರು. ನಿನಗೆ ಪೂರ್ಣಜ್ಞಾನವನ್ನು ಹೇಳುವೆನು.'

ಅದನ್ನು ಕೇಳಿ ಬಹಳ ಸಂತೋಷಬಟ್ಟು, ಆನಂದದಿಂದ ಮತ್ತೆ ಐದು ವರ್ಷ ಇಂದ್ರನು ಪ್ರಜಾಪತಿಯ ಬಳಿ ಇದ್ದನು. ಐದು ವರ್ಷ ಮುಗಿದಮೇಲೆ ಇಂದ್ರನಿಗೆ ಪ್ರಜಾಪತಿಯು ಅತ್ಯಂತ ಪ್ರೇಮದಿಂದ ಅಂದದ್ದು, 'ಇಂದ್ರನೇ, ಈ ಶರೀರವು ಸಾವಿಗೀಡು. ಸಾವಿಗೀಡಾಗದ ಆತ್ಮನ ಮನೆ ಇದು, ವಾಸ ಸ್ಥಾನವಿದು. ಆತ್ಮನು ಈ ಶರೀರದಲ್ಲಿರುವಾಗ ಮತ್ತು ಈ ಶರೀರವೆ ತಾನು ಅಥವಾ ಈ ಶರೀರವು ತನ್ನದು, ಎಂದು ಭಾವಿಸುತಿರುವವರೆಗೆ ಪ್ರಿಯಾಪ್ರಿಯ ಇಷ್ಟಾನಿಷ್ಟವೆಂಬ ದ್ವಂದ್ವಗಳಿಂದ ಅವನು ಬದ್ಧನು. ಅವನು ಅಶರೀರನಾದ ನೆಂದರೆ ಪ್ರಿಯಾಪ್ರಿಯಗಳಿಂದ ಮುಕ್ತನು. ವಾಯು, ಅಭ್ರ, ಮೇಘಾದಿಗಳು ಸಾಕಾರವಾಗಿ ಈ ನಿರಾಕಾರ ಆಕಾಶದಲ್ಲಿ ವ್ಯಕ್ತವಾಗುವವು. ಆದರೆ ತಮ್ಮ ಕಾರ್ಯವಾದ ಬಳಿಕ ಪುನಃ ಅವ್ಯಕ್ತವಾದ ಸ್ವಸ್ವರೂಪವನ್ನು ಹೊಂದುವವು. ಅದೇ ಪ್ರಕಾರ ಸಂಪ್ರಸನ್ನ ಆತ್ಮನು ಶರೀರದಲ್ಲಿ ವ್ಯಕ್ತನಾಗಿ ಪುನಃ ಶರೀರ ಪಾತದ ನಂತರ ಪರಂಜ್ಯೋತಿಯಲ್ಲಿ ಒಂದಾಗುವನು. ಬಂಡಿಗೆ ಹೂಡಿದ ಕುದುರೆಯಂತೆ ಪ್ರಾಣವು ಈ ಶರೀರಕ್ಕೆ ಹೂಡಲ್ಪಟ್ಟಿರುವದು. ಈ ಶರೀರವನ್ನು ಬಿಟ್ಟ ಆತ್ಮನು ಸ್ವಚ್ಛಂದದಿಂದ ಲೋಕಾದಿಲೋಕಗಳಲ್ಲಿ ವಿಹರಿಸುವನು. ಆ ಆತ್ಮನು ನೋಡಲಿಕ್ಕೆ ಸಮರ್ಥನಾಗಬೇಕೆಂದೆ ಶರೀರದಲ್ಲಿ ಈ ಕಣ್ಣುಗಳು, ಅವನು ಕೇಳಬೇಕೆಂದೆ ಈ ಕಿವಿಗಳು, ಅವನು ವಿಚಾರಿಸಬೇಕೆಂದೆ ಈ ಮನಸು ಉತ್ಪನ್ನವಾಗಿರುವವು. ಅವನ ಸಂಕಲ್ಪದಿಂದಲೆ ಈ ಚರಾಚರ ಸೃಷ್ಟಿಯ ಉತ್ಪತ್ತಿಯು. ಈ ಜ್ಞಾನವನ್ನರಿತವನು ಬ್ರಹ್ಮಲೋಕವನ್ನು ಪಡೆಯುವನು.

'ಬ್ರಹ್ಮನು, ಆತ್ಮನು, ಮನುಷ್ಯನ ಹೃದಯಕಮಲದಲ್ಲಿರುವನು. ಅವನು ತುರೀಯಾವಸ್ಥೆಯಲ್ಲಿ ಬ್ರಹ್ಮಲೋಕಕ್ಕೆ ಹೋಗಿ ಅನಂತವನ್ನು ಪಡೆದು ಮತ್ತೆ

ಸ್ವಲೀಲೆಯಿಂದ ಈ ಹೃದಯಕಮಲದಲ್ಲಿ ಅವತರಿಸುವನು.

'ಯಾವನು ಚನ್ನಾಗಿ ವೇದಾಧ್ಯಯನ ಮಾಡಿ ಯೋಗ್ಯ ಗುರುಗಳ ಸೇವೆ ಮಾಡಿ, ಗೃಹಸ್ಥಾಶ್ರಮಿಯಾಗಿ ಧರ್ಮಕರ್ಮಗಳನ್ನು ಮಾಡುತ್ತ ಇರುವನೊ ಯಾವನು ಪೂರ್ಣ ಸಂಯಮಿಯಾಗಿ ಎಲ್ಲ ಇಂದ್ರಿಯಗಳನ್ನು ಅಂಕಿತದಲ್ಲಿಟ್ಟುಕೊಳ್ಳುವನೊ ಯಾವನು ಯಾವಾಗಲೂ ಅಹಿಂಸಾಧರ್ಮವನ್ನು ಪಾಲಿಸುವನೊ ಅವನು ಈ ಬ್ರಹ್ಮವಿದ್ಯೆಯನ್ನು ಪಡೆಯುವನು. ಅವನಿಗೆ ಬ್ರಹ್ಮಲೋಕವು ಪ್ರಾಪ್ತವಾಗುವದು.

'ಇದೇ ಬ್ರಹ್ಮಜ್ಞಾನವು. ಪ್ರಿಯ ಶಿಷ್ಯನೇ, ನಿನಗೆ ಈ ದಿನ ದಿವ್ಯಜ್ಞಾನವನ್ನು ಹೇಳಿರುವೆನು. ಅದನ್ನು ಸಾಕ್ಷಾತ್ಕರಿಸು, ಭಾವದಲ್ಲಿ ನಿತ್ಯ ಅಳವಡಿಸು. ಅಂದರೆ ನೀನು ಪರಮಾನಂದವನ್ನು ಪಡೆಯುವಿ, ನಿಷ್ಕಾಮನಾಗುವಿ ಮತ್ತು ಶ್ರೇಷ್ಠ ವೀರಕರ್ಮಗಳನ್ನು ಮಾಡಲು ಸಮರ್ಥನಾಗುವಿ.'

ಈ ವಿದ್ಯೆಯನ್ನರಿತುಕೊಂಡು ಇಂದ್ರನು ಅತ್ಯಂತ ಸಮಾಧಾನಹೊಂದಿದನು. ಗುರುಗಳ ಅನುಗ್ರಹ ಪಡೆದು ಕೃತಾರ್ಥನಾದನು. ಬಳಿಕ ಅವನು ದೇವತೆಗಳ ಕಡೆಗೆ ಹೋಗಿ ಈ ಜ್ಞಾನವನ್ನುಪದೇಶಿಸಿದನು. ಅವರು ಅದನ್ನು ಕೇಳಿ ಧನ್ಯರಾದರು, ಸಮರ್ಥರಾದರು, ಸಾಹಸಿಗಳಾದರು, ಶಾಂತರಾದರು.

ಅಸುರರು ಮಾತ್ರ ಅಲ್ಪಜ್ಞಾನದಿಂದ ಸಂತುಷ್ಟರಾಗಿ ನಿಜವಾದ ಜ್ಞಾನವನ್ನರಿಯದೆ ದುರ್ಬಲರೂ ಅಹಂಭಾವಿಗಳೂ ಆದರು.

## ೧೦. ಸ್ಫೂರ್ತಿಯಿಂದ ಜ್ಞಾನಲಾಭ

ಊರಿಂದ ಸ್ವಲ್ಪ ದೂರದಲ್ಲಿ ಒಂದು ರಮ್ಯವಾದ ಪ್ರದೇಶವಿತ್ತು. ಅಲ್ಲಿ ಒಂದು ಸಣ್ಣ ಗುಡಿಸಲ ಎದುರಿನಲ್ಲಿರುವ ದೊಡ್ಡ ವಟವೃಕ್ಷದ ನೆಳಲಲ್ಲಿ ಸಾಯಂಕಾಲದ ಸಮಯದಲ್ಲಿ ಒಬ್ಬ ಗಂಭೀರ ಗೃಹಸ್ಥನು ಕುಳಿತಿದ್ದನು. ಅವನಿಗೆ ಜನರು ಋಷಿ ಎನ್ನುತಿದ್ದರು. ದೈವೀಸ್ಫೂರ್ತಿಗನುಸರಿಸಿ ಅವನ ಆಚರಣೆ ಇರುವದರಿಂದ ಅವನಿಗೆ ಈ ಹೆಸರು ಬಂದಿತ್ತು. ಶುದ್ಧ ಮನಸಿನಲ್ಲಿ ಆದ ಸ್ಫೂರ್ತಿಯಂತೆ ನುಡಿ, ಆ ನುಡಿಯಂತೆ ನಡೆ ಇವು ಅವನಲ್ಲಿರುವದರಿಂದ

ಅವನು ಎಲ್ಲರಿಗೂ ಮಾರ್ಗದರ್ಶಿಯಾಗಿದ್ದನು. ಅಲ್ಲಿ ಅವನ ಸುತ್ತಲು ಹಲವು ದರ್ಶನೋತ್ಸುಕರೂ ಹಲವರು ಅವನ ಉಪದೇಶ ಕೇಳಲು ಬಂದವರೂ ನಮ್ರಭಾವದಿಂದ ಕುಳಿತುಕೊಂಡಿದ್ದರು. ಅವನ ಹತ್ತಿರದಲ್ಲಿ ತೇಜಃಪುಂಜ ಮುಖಕಮಲಗಳುಳ್ಳ ಬ್ರಹ್ಮಚಾರಿಗಳು ಗುರುಗಳೊಡನೆ ಬ್ರಹ್ಮಚರ್ಚೆಯನ್ನು ನಡೆಸಿದ್ದರು.

ಒಬ್ಬ ಬ್ರಹ್ಮಚಾರಿಯು ಅಂದದ್ದು, 'ಭಗವನ್, ಈ ನಮ್ಮ ಇಂದ್ರಿಯ ಕ್ರಿಯೆಗಳ ಪ್ರೇರಕನು ಯಾರು? ಯಾರ ಅಪ್ಪಣೆಯ ಮೇರೆಗೆ ಇವು ತಮ್ಮ ತಮ್ಮ ಕೆಲಸಗಳಲ್ಲಿ ತೊಡಗುವವು?' ಅದನ್ನು ಕೇಳಿ ಗುರುಗಳು ಅಂದದ್ದು, 'ಪ್ರಿಯ ಶಿಷ್ಯನೇ, ಕಣ್ಣು, ಕಿವಿ, ಮೂಗು, ಕೈ, ಕಾಲು, ಬಾಯಿ ಮುಂತಾದ ಕರ್ಮೇಂದ್ರಿಯ ಮತ್ತು ಜ್ಞಾನೇಂದ್ರಿಯಗಳಿಗೆ ಮನಸ್ಸೇ ಪ್ರೇರಕವು. ಮನಸ್ಸೇ ಇಂದ್ರಿಯರಾಜವೆನಿಸುವದು.'

ಇಷ್ಟರಿಂದ ಸಮಾಧಾನ ಹೊಂದದೆ, ಮನಸ್ಸನ್ನು ಪ್ರೇರಿಸುವವರಾರು, ಎಂದು ಆ ಶಿಷ್ಯನು ಪುನಃ ಪ್ರಶ್ನೆ ಮಾಡಿದನು. ಅದಕ್ಕೆ ಗುರುಗಳು ಉತ್ತರ ಕೊಟ್ಟದ್ದೇನಂದರೆ, 'ವತ್ಸಾ, ಆತ್ಮಶಕ್ತಿಯೆ ಮನಸ್ಸನ್ನು ಪ್ರೇರಿಸುವದು. ಆತ್ಮನು ಇವೆಲ್ಲವುಗಳಾಚೆಗಿರುವನು. ಗೋಚರ ಅಗೋಚರ ವಸ್ತುಗಳಾಚೆ ಗಿರುವವನವನು. ಅವನನ್ನು ಈ ಇಂದ್ರಿಯಗಳು ಅರಿಯಲಾರವು, ಈ ಮನಸ್ಸು ಆಕಲಿಸಲಾರದು. ಆ ಆತ್ಮನೆ ಇವೆಲ್ಲವುಗಳ ಸಾಕ್ಷಿಯು, ಇವೆಲ್ಲವುಗಳ ಆಕಲನಮಾಡುವವನು. ಅವನು ಚಿದ್ರೂಪನು, ಚಿದ್ಘನನು. ಅವನೇ ಬ್ರಹ್ಮನು. ಅವನೇ ನಿಜವಸ್ತು, ಹೊರತು ಜನರು ಬ್ರಹ್ಮನೆಂದು ಉಪಾಸಿಸುತಿರುವ ದೇವತೆಗಳಾರೂ ನಿಜವಾದ ಬ್ರಹ್ಮವಲ್ಲ.'

'ಆ ಬ್ರಹ್ಮನನ್ನು ತಿಳಿದುಕೊಳ್ಳುವ ಬಗೆ ಹೇಗೆ? ನೀವಂತೂ ಅದು ಅತೀಂದ್ರಿಯವೆಂದು ಹೇಳುವಿರಿ' ಎಂದು ಶಿಷ್ಯನು ಪುನಃ ಕೇಳಿದನು. ಆಗ ಋಷಿಯು ಅವನಿಗೆ ಅಂದದ್ದು, 'ಅದು ಅತೀಂದ್ರಿಯವಿದ್ದುದೇನೋ ನಿಜವು. ಬಾಹ್ಯಪ್ರವೃತ್ತಿಯುಳ್ಳ ಮನಸಿನಿಂದ ಅದನ್ನು ಗುರುತಿಸುವದು ಅಶಕ್ಯ. ಆದರೆ ನಿನ್ನ ಚಿತ್ತವನ್ನು ಅಂತರ್ಮುಖಮಾಡು, ಆಂದರೆ ನೀನು ಆತ್ಮನನ್ನು ಅರಿಯ ಬಹುದು. ಬ್ರಹ್ಮವೆಂಬುದು ಬುದ್ಧಿಗೆ ತಿಳಿಯುವ ವಸ್ತು ಅಲ್ಲದಿದ್ದರೂ ಅಂತರ್ಮುಖ ಧ್ಯಾನಮಗ್ನ ಚಿತ್ತಕ್ಕೆ ಹೊಳೆಯುವ ವಸ್ತು ಅದು. ಅದು ಇಂತಹದೆಂದು ಯಾರೂ ಬೆರಳಿನಿಂದ ತೋರಿಸಲರಿಯರು, ಅಥವಾ ವಾಣಿ

ಯಿಂದ ವರ್ಣಿಸಲರಿಯರು. ನಾನು ಬ್ರಹ್ಮನನ್ನು ಬಲ್ಲೆನು, ಎಂದು ಯಾರಾದರೂ ಅಂದರೆ ಆ ಬ್ರಹ್ಮವು ಅವನಿಗೆ ಗೊತ್ತಿಲ್ಲವೆಂದೂ ಅವನು ಆತ್ಮವಂಚಿತನೆಂದೂ ಸ್ಪಷ್ಟವಾಗಿ ಹೇಳಬಹುದು. ಯಾಕಂದರೆ ಬ್ರಹ್ಮಜ್ಞಾನಿಯು ನಿರಭಿಮಾನಿಯೂ ಶಾಂತನೂ ಸಂತೃಪ್ತನೂ ಇರುವನು. ಆ ಜ್ಞಾನದ ಹಾದಿಯು ಆತ್ಮಜ್ಞಾನಿಗಳ ಬೋಧದಿಂದ ಎಲ್ಲರಿಗೂ ಗೊತ್ತಾಗಬಲ್ಲದು. ಆ ಜ್ಞಾನಾಮೃತವನುಂಡವರು ಶೋಕಾತೀತರೂ ಅಮರರೂ ಆಗುವರು. ನಾವು ಈ ಜನ್ಮದಲ್ಲಿಯೆ ಆ ಜ್ಞಾನವನ್ನು ಮಾಡಿಕೊಳ್ಳಲಿಕ್ಕೆಬೇಕು. ಇಲ್ಲದಿದ್ದರೆ ನಾವು ಸುಪ್ರಸಂಗವನ್ನು ಕಳಕೊಂಡಂತಾಗುವದು ಮತ್ತು ದುಃಸ್ಥಿತಿಗೆ ಈಡಾಗುವೆವು.

'ಬಾಳಾ, ಇನ್ನು ಈ ಸ್ಫುರಣಾತ್ಮಕ ಜ್ಞಾನವು ಹೇಗೆ ಆಗುವದು, ಈ ಬಗ್ಗೆ ಒಂದು ದೃಷ್ಟಾಂತವನ್ನು ಹೇಳುವೆನು ಕೇಳು. ಒಮ್ಮೆ ದೇವಾಸುರರ ನಡುವೆ ಮಹಾಯುದ್ಧವಾಯಿತು. ಬ್ರಹ್ಮನ ಸಹಾಯವಿದ್ದ ಮೂಲಕ ದೇವತೆಗಳು ಅಸುರರನ್ನು ಸೋಲಿಸಿದರು. ಆದರೆ ದೇವತೆಗಳು ಅದನ್ನರಿಯದೆ ಮತ್ತು ಲೆಕ್ಕಿಸದೆ ತಾವೇ ಅಸುರರನ್ನು ಸೋಲಿಸಿದವರೆಂದು ಗರ್ವಿತರಾದರು. 'ಇದು ನಮ್ಮ ಮಹಾತ್ಮ್ಯವು, ನಾವೇ ಅತ್ಯಂತ ಬಲಶಾಲಿಗಳು' ಎಂದು ಮುಂತಾಗಿ ದೇವತೆಗಳು ಮೆರೆಯಲಾರಂಭಿಸಿದರು. ಆಗ ಆಕಸ್ಮಾತ್ತಾಗಿ ಒಂದು ವಿಲಕ್ಷಣ ವಿಭೂತಿಯು ಒಮ್ಮೆಲೆ ಅವರೆದುರಿಗೆ ಪ್ರಕಟವಾಯಿತು. ಅದು ಏನು ಎಂಬುದು ಅವರಿಗೆ ತಿಳಿಯದೆ ಹೋಯಿತು.

'ಆಗ ದೇವತೆಗಳು ಅಗ್ನಿಯನ್ನು ಕರೆದು, ಈ ವಿಲಕ್ಷಣ ವಸ್ತು ಯಾವುದು, ಇದನ್ನು ಅರಿತುಕೊಂಡು ಬಾ, ಎಂದು ವಿಜ್ಞಾಪಿಸಿದರು. ಅವನು ಆ ಮೂರ್ತಿಯ ಬಳಿಗೆ ಹೋಗಲಾಗಿ ಅದು ಅವನನ್ನು ಕೇಳಿದ್ದೇನಂದರೆ, 'ನೀನು ಯಾರು ಮತ್ತು ನಿನ್ನ ಬಲವೇನು ?' ಅದಕ್ಕೆ 'ನಾನು ಅಗ್ನಿಯು, ನನಗೆ ಜಾತವೇದನೆಂಬ ಹೆಸರಾದರೂ ಇರುವದು. ನಾನು ಈ ಜಗತ್ತಿನಲ್ಲಿದ್ದ ಯಚ್ಚಾವತ್ ವಸ್ತುಗಳನ್ನು ಸುಡುವಷ್ಟು ಸಾಮರ್ಥ್ಯವುಳ್ಳವನು' ಎಂದು ಅಗ್ನಿದೇವರು ಉತ್ತರಕೊಟ್ಟನು. ಈ ದರ್ಪೋಕ್ತಿಯನ್ನು ಕೇಳಿ, 'ಹಾಗಾದರೆ ಇಕೋ ಈ ಒಣ ಹುಲ್ಲುಕಡ್ಡಿಯನ್ನು ಸುಡು' ಎಂದು ಆ ವಿಭೂತಿಯು ಬೆಸಸಿತು. ಅದನ್ನು ಸುಡುವದು ಅಗ್ನಿಗೆ ಸಾಧ್ಯವಾಗಲಿಲ್ಲ. ಎಲ್ಲ ಪ್ರಯತ್ನಗಳೂ ವ್ಯರ್ಥವಾದವು. ಕೊನೆಗೆ ನಿರುಪಾಯನಾಗಿ, ತನ್ನಷ್ಟಕ್ಕೆ ತಾನೇ ನಾಚಿ, ಕೈಲಾಗದವನಾಗಿ

ಅಗ್ನಿಯು ತಿರುಗಿ ದೇವತೆಗಳ ಬಳಿ ಹೋದನು. 'ನಾನು ಆ ವಿಭೂತಿಯನ್ನರಿಯೆನು, ಅದೇನೋ ಒಂದು ವಿಲಕ್ಷಣ ವಸ್ತು ಇದೆ,' ಎಂದು ತನ್ನ ಅಜ್ಞರಿಯನ್ನು ತೋರಿ ತನ್ನ ದುರ್ಬಲತೆಯನ್ನು ಒಪ್ಪಿಕೊಂಡನು.

'ಇದನ್ನು ನೋಡಿ ಆಶೆಗೇಡಾಗದೆ ದೇವತೆಗಳು ವಾಯುದೇವರನ್ನು ಅದೇ ಕಾರ್ಯಕ್ಕಾಗಿ ಕಳುಹಿದರು. ವಾಯುವು ತನ್ನ ಸ್ವಾಭಾವಿಕ ವೇಗದಿಂದ ವಿಭೂತಿಯ ಬಳಿ ಸಾರಿದನು. ಅವನಿಗಾದರೂ 'ನೀನು ಯಾರು, ನಿನ್ನ ಶಕ್ತಿ ಎಷ್ಟು.' ಎಂದು ಆ ವಿಭೂತಿಯು ಪ್ರಶ್ನೆಮಾಡಿತು. ಆಗ, 'ನಾನು ವಾಯುವು, ನನಗೆ ಮಾತರಿಶ್ವನ್ ಅಂದರೆ ಆಕಾಶದಲ್ಲಿ ಸುಳಿದಾಡುವವನು, ಎಂಬ ಹೆಸರೂ ಇರುವದು. ನಾನು ಈ ವಿಶ್ವದಲ್ಲಿಯ ಎಲ್ಲ ವಸ್ತುಗಳನ್ನು ನನ್ನ ಉಸುರಿನಿಂದ ಹಾರಹೊಡೆಯಬಲ್ಲೆನು' ಎಂದು ವಾಯುವು ಹೇಳಿದನು. 'ಹಾಗಾದರೆ ಹೇ ಬಲವಾನ್ ವಾಯುವೇ, ಈ ಕಸದ ಕಡ್ಡಿಯೊಂದನ್ನು ಹಾರಿಸಿ ನಿನ್ನ ಸಾಮರ್ಥ್ಯವನ್ನು ತೋರಿಸು' ಎಂದು ಆ ವಿಭೂತಿಯು ಅವನ ಕೈಯಲ್ಲಿ ಒಂದು ಕಡ್ಡಿಯನ್ನು ಕೊಟ್ಟಿತು. ಅದನ್ನು ಹಾರಿಸುವ ಸಾಮರ್ಥ್ಯವಿಲ್ಲದೆ ಹತಬಲನಾಗಿ ವಾಯುವು ಕಳೆಗುಂದಿದನು. ಹೇಳದೆ ಕೇಳದೆ ಅಲ್ಲಿಂದ ಹೊರಟು ದೇವತೆಗಳ ಬಳಿಗೆ ಹೋಗಿ, 'ನೀವು ಹೇಳಿದ ಕೆಲಸವು ನನ್ನಿಂದಾಗದು, ಅದೇನೋ ಪ್ರಕರಣವೇ ಬೇರೆ ತೋರುತಿದೆ' ಎಂದು ತನ್ನ ಅಸಹಾಯಸ್ಥಿತಿಯನ್ನು ಬಣ್ಣಿಸಿ ಹೇಳಿದನು.

'ಈ ಮಾತನ್ನು ಕೇಳಿ ದೇವತೆಗಳೆಲ್ಲ ವಿಸ್ಮಯಗೊಂಡರು. ಕೊನೆಗೆ ಸುರೇಶನಾದ ಇಂದ್ರನೆ ಸ್ವತಃ ಆ ವಿಭೂತಿಯನ್ನು ಕುರಿತು ಹೋದನು. ಒಡನೆ ಅದು ಅಂತರ್ಧಾನ ಹೊಂದಿತು. ಆ ಸ್ಥಲದಲ್ಲಿ ಓರ್ವ ಸುಂದರಿಯು ಇಂದ್ರನ ಕಣ್ಣಿಗೆ ಕಂಡಳು. ಇಂದ್ರನು ಆಕೆಗೆ ನಮಸ್ಕಾರಮಾಡಿ ಆ ವಿಭೂತಿಯ ಬಗ್ಗೆ ಪ್ರಶ್ನೆ ಮಾಡಲು ಆಕೆ ಅಂದದ್ದು 'ಮರುಳ ದೇವತೆಗಳಿರಾ, ಅವನು ಸಾಕ್ಷಾತ್ ಬ್ರಹ್ಮನು. ಕ್ಷರಾಕ್ಷರಗಳಾಚೆಗಿನವನು. ಅವನ ಶಕ್ತಿಯಿಂದಲೆ ನೀವು ಅಸುರರನ್ನು ಗೆದ್ದಿರಿ. ಆದರೆ ಅದನ್ನು ತಿಳಿಯದೆ ನೀವು ಸೊಕ್ಕಿನಿಂದ ಮೆರೆಯಲಾರಂಭಿಸಿದಿರಿ. ಅದನ್ನು ನೋಡಿ ನಿಮಗೆ ಬುದ್ಧಿಗಲಿಸಲಿಕ್ಕೆಂದು ಅವನು ಈ ವಿಲಕ್ಷಣ ರೂಪದಿಂದ ಆವಿರ್ಭವಿಸಿದನು. ಅವನೇ ಎಲ್ಲರ ಪ್ರೇರಕನು, ಸರ್ವನಿಯಾಮಕನು. ಅವನನ್ನು ಇನ್ನಾದರೂ ಮರೆಯದೆ ಮನ್ನಿಸಿರಿ.' ಇಷ್ಟು ಹೇಳಿ ಆಕೆಯೂ ಅಂತರ್ಧಾನ ಹೊಂದಿದಳು. ಆಗ ಇಂದ್ರನು ಕ್ಷಮೆಬೇಡಿ ಆಕೆಗೆ ಪುನಃ ವಂದನೆ ಮಾಡಿದನು.

'ಇಲ್ಲಿ ವಿದ್ಯಾದೇವಿಯು ಯಾವ ಪ್ರಕಾರ ಅಕಸ್ಮಾತ್ತಾಗಿ ಇಂದ್ರನಿಗೆ ಬ್ರಹ್ಮಜ್ಞಾನವನ್ನನುಗ್ರಹಿಸಿದಳೊ ಅದೇ ರೀತಿ, ಸಾಧಕನ ಅಂತರ್ಮುಖ ಚಿತ್ತಕ್ಕೆ ಬ್ರಹ್ಮಸ್ವರೂಪವು ಹೊಳೆಯುವದು. ಅದೇ ಸಾಕ್ಷಾತ್ಕಾರವು. ಅದನ್ನು ಸ್ಥಿರಗೊಳಿಸುತ್ತ ಹೋದರೆ ಅದೇ ಬ್ರಾಹ್ಮೀಸ್ಥಿತಿಯು. ಸೃಷ್ಟಿಯು ವಿವಿಧ ಮತ್ತು ನಶ್ವರ ಅಥವಾ ಕ್ಷಣಶಃ ಪಲ್ಲಟಿಸುವಂತೆ ಕಂಡರೂ ಸೃಷ್ಟಿಗೆ ಮೂಲಭೂತವಾದ ಬ್ರಹ್ಮವು ಏಕವೂ ಅಮೃತವೂ ಇರುವದು. ಆ ಜ್ಞಾನವನ್ನು ಪಡೆದು ಅದನ್ನು ಮನದಲ್ಲಿ ಸ್ಥಿರಗೊಳಿಸಿ ಮನುಷ್ಯನು ನಡೆದರೆ ಅವನ ಆಚರಣೆಯು ದಿವ್ಯವಾಗುವದು, ಸ್ವಾನಂದದಾಯಿಯಾಗುವದು, ಪರಹಿತ ಸಾಧಕವಾಗುವದು. ಆದುದರಿಂದ ವತ್ಸಾ, ಆ ಜ್ಞಾನವನ್ನು ಪಡೆಯುವಂಥವನಾಗು.'

ಈ ಪ್ರಕಾರ ಆ ಋಷಿಯು ಉಸುರಿದ ಸರಲ, ಸುಲಭ, ಗಂಭೀರ ವಾಣಿಯನ್ನು ಕೇಳಿ ಎಲ್ಲರೂ ಅತ್ಯಂತ ತಲ್ಲೀನರಾದರು. ಅವನು ತನ್ನ ಜೀವನ ರಹಸ್ಯವನ್ನೆ ಈ ನುಡಿಯಲ್ಲಿ ರೂಪುಗೊಳಿಸಿದ್ದನು. ಆ ಬಳಿಕ ಸಂಧ್ಯೋಪಾಸನೆಯ ಕಾಲವಾದುದರಿಂದ ಎಲ್ಲರೂ ಋಷಿಗೆ ನಮನಮಾಡಿ ತಮ್ಮ ತಮ್ಮ ಮನೆಗೆ ಹೋದರು.

## ೧೧. ಭಾರ್ಗವೀ ವಾರುಣೀ ವಿದ್ಯೆ

ವರುಣಪುತ್ರನಾದ ಭೃಗುಕುಮಾರನ ಮನಸಿನಲ್ಲಿ ಬ್ರಹ್ಮನನ್ನರಿತುಕೊಳ್ಳಬೇಕೆಂಬ ಕುತೂಹಲವುಂಟಾಯಿತು. ಆಗ ಅವನು ತಂದೆಯನ್ನು ಕುರಿತು ಅಂದದ್ದು, 'ಪೂಜ್ಯರೇ, ನನಗೆ ಬ್ರಹ್ಮವಿದ್ಯೆಯನ್ನು ಹೇಳಿರಿ. ಅದೇ ಎಲ್ಲಕ್ಕೂ ಶ್ರೇಷ್ಠ ವಿದ್ಯೆಯೆಂದು ನನ್ನ ಭಾವನೆಯಿದೆ.' ತಂದೆಯು ಮಗನ ಜಿಜ್ಞಾಸೆಯನ್ನು ನೋಡಿ ಅಂದದ್ದು, 'ಪ್ರಿಯ ಬಾಲಕನೇ, ಈ ಅನ್ನ (ಜಡ), ಪ್ರಾಣ, ಕಣ್ಣು, ಕಿವಿ, ಪಶು, ಪಕ್ಷಿ, ಈ ಸೃಷ್ಟಿ, ಈ ಸೂರ್ಯಚಂದ್ರರು ಇವೆಲ್ಲವನ್ನು ನೀನು ದಿನಾಲು ನೋಡುವಿ. ಇವು ಎಲ್ಲಿಂದ ಬಂದವು ಇದರ ವಿಚಾರವನ್ನು ನೀನು ಮಾಡಿರುವಿಯೇನು? ಇವೆಲ್ಲವೂ ಯಾತರಿಂದ ಉತ್ಪನ್ನ

ವಾದವೊ ಉತ್ಪನ್ನವಾಗಿ ಯಾತರ ಆಧಾರದಿಂದ ನಿಂತಿರುವವೊ ಲಯ ಹೊಂದುವಾಗ ಯಾವುದನ್ನು ಕುರಿತು ಇವು ಸಾಗುವವೊ ಮತ್ತು ಇವೆಲ್ಲ ಯಾತರಲ್ಲಿ ಲೀನವಾಗುವವೊ ಅದನ್ನೆ ತಿಳಿದುಕೊಳ್ಳತಕ್ಕದ್ದು. ಅದೇ ಎಲ್ಲಕ್ಕೂ ಹೆಚ್ಚಿನದು, ಎಲ್ಲವುಗಳ ಆಶ್ರಯವು ಮತ್ತು ವಿಶ್ರಾಮವು. ಅದೇ ಬ್ರಹ್ಮವು. ತಪಸ್ಸು ಮಾಡು, ಅಂದರೆ ನಿನಗೆ ಅದು ತಿಳಿಯುವದು.'

ಇದನ್ನು ಕೇಳಿ, ಒಳ್ಳೇದು, ಎಂದು ಭೃಗುವು ತಪಸ್ಸನ್ನಾರಂಭಿಸಿದನು. ಸಂಯಮಶೀಲನಾಗಿ ವ್ರತಗಳನ್ನಾಚರಿಸುತ್ತ ನಿತ್ಯನೇಮದಿಂದಿದ್ದು ತನ್ನ ಇಷ್ಟ ಜ್ಞಾನವನ್ನು ಕುರಿತು ಅವನು ದಿನಾಲು ಏಕಾಗ್ರಮನಸಿನಿಂದ ಧ್ಯಾನಮಾಡಲನುವಾದನು. ಹೀಗೆ ತಪಮಾಡುತಿರಲಾಗಿ ಅವನ ಗ್ರಹಣಶಕ್ತಿಯು ದಿನದಿನಕ್ಕೆ ಹೆಚ್ಚು ತೀವ್ರವಾಗುತ್ತ ನಡೆಯಿತು. ಮೊಟ್ಟಮೊದಲು ಅವನಿಗೆ ಈ ಜಡ (ಅನ್ನ) ವೆ ಬ್ರಹ್ಮವೆಂದು ತೋರಿತು. ಕಣ್ಣು ಕಿವಿ ಮುಂತಾದ ನಮ್ಮ ಐದು ಜ್ಞಾನೇಂದ್ರಿಯಗಳಿಗೆ ಗೋಚರವಾಗುವದೆ ಆತ್ಯಂತಿಕ ವಸ್ತು, ಅದರಾಚೆಗೇನೂ ಇಲ್ಲ, ಎಂದು ಅವನಿಗೆ ಭಾಸವಾಯಿತು. ಪಂಚಭೂತಾತ್ಮಕವಾದ ಈ ಜಡ ಸೃಷ್ಟಿಯಲ್ಲಿಯೆ ಎಲ್ಲ ವಸ್ತುಗಳು ಹುಟ್ಟಿ ಬಾಳಿ ಪುನಃ ಅದರಲ್ಲಿಯೆ ಲೀನವಾಗುವವು, ಎಂಬುವದನ್ನು ಅವನು ಕಂಡನು. ಆದರೆ ಅವನಿಗೆ ಅದು ಆತ್ಯಂತಿಕ ಸತ್ಯವೆಂದು ಮನವರಿಕೆಯಾಗಲೊಲ್ಲದು. ಆದುದರಿಂದ ಅವನು ಮತ್ತೆ ಕೇಳಬೇಕೆಂದು ತಂದೆಯ ಬಳಿಗೆ ಹೋದನು. ಮಗನು ಹೇಳಿದ್ದನ್ನೆಲ್ಲ ಕೇಳಿಕೊಂಡು ತಂದೆಯು ಅಂದದ್ದು, 'ಮಗನೇ ನೀನು ಈಗ ತಪಸ್ಸು ಮಾಡಿದ್ದು ವ್ಯರ್ಥವೆಂದು ತಿಳಿದುಕೊಳ್ಳಬೇಡ. ನೀನು ಕಂಡದ್ದು ಅನ್ನಮಯ ಕೋಶವೆನಿಸುವದು. ಈ ವಿವಿಧ ಸೃಷ್ಟಿಯು ಪಂಚಭೂತಗಳಿಂದಲೆ ಆಗಿರುವದು ಎಂಬುದನ್ನು ನೀನು ಈಗ ಕಂಡುಹಿಡಿದಿರುವಿ. ಆದರೆ ಇದರಾಚೆಗೆ ನೀನು ಹೋಗಲಿಕ್ಕೆ ಬೇಕು. ಮತ್ತೆ ತಪಸ್ಸು ಮಾಡು.'

ಭೃಗುವು ಪುನಃ ತಪವನ್ನಾರಂಭಿಸಿದನು. ಆಗ ಚೇತನಾಶಕ್ತಿಯು ಅಥವಾ ಪ್ರಾಣವು ಎಲ್ಲಕ್ಕೂ ಹೆಚ್ಚಿನದು ಎಂದು ಅವನಿಗೆ ಹೊಳೆಯಿತು. ಅದರಲ್ಲಿಯೆ ಎಲ್ಲ ವಸ್ತುಗಳ ಉತ್ಪತ್ತಿಸ್ಥಿತಿಲಯಗಳಿರುವವು, ಎಂದು ಅವನು ತಿಳಿದನು. ಆದರೆ ಅದರಿಂದಲೂ ಅವನಿಗೆ ಪೂರ್ಣ ಸಮಾಧಾನವಾಗಲಿಲ್ಲ. ಆಗ ತನಗೆ ತಿಳಿದುದನ್ನು ಹೇಳಿ ಮುಂದಿನ ಮಾರ್ಗವನ್ನು ಕೇಳಬೇಕೆಂದು ಪುನಃ ಅವನು ತಂದೆಯ ಕಡೆಗೆ ಹೋದನು. 'ನೀನು ಈಗ ನೋಡಿದ್ದು

ಪ್ರಾಣಮಯ ಕೋಶವು. ಇನ್ನೂ ಇದರಾಚೆಗೆ ಹೋಗಲಿಕ್ಕೆ ಬೇಕು. ಹಾಗೆ ಮಾಡಲು ತಪಸ್ಸೆ ಉಪಾಯವು ' ಎಂದು ತಂದೆಯು ಹೇಳಿದನು.

ಮಗನು ಆಶೆಗೆಡದೆ ಮತ್ತೆ ತಪವನ್ನಾಶ್ರಯಿಸಿದನು. ಆಗ ಸಾಮಾನ್ಯ ಪ್ರಾಣಶಕ್ತಿಗಿಂತ ಮನಃಶಕ್ತಿಯು ಹೆಚ್ಚಿನದು, ಅದರಲ್ಲಿಯೆ ಎಲ್ಲ ಚರಾಚರ ವಸ್ತುಗಳು ಹುಟ್ಟುವವು, ಇರುವವು ಮತ್ತು ಸಾಯುವವು ಎಂದರಿತುಕೊಂಡನು. ತಂದೆಯ ಬಳಿ ಹೋಗಿ ಹಾಗೆ ಹೇಳಲು ಅವನು ಅಂದದ್ದು, ' ಏನು ಸಾಹಸವು ಮಗುವೇ, ನಿನ್ನದು ! ಆದರೆ ಪೂರ್ಣ ಸತ್ಯದಿಂದ ನೀನು ಇನ್ನೂ ದೂರನಿರುವಿ. ನೀನು ಈಗ ಗುರುತಿಸಿದ್ದು ಮನೋಮಯ ಕೋಶವು. ಈ ಸೃಷ್ಟಿಯೆಲ್ಲ ಸೂಕ್ಷ್ಮರೂಪದಿಂದ ಅಲ್ಲಿಯೆ ಮೊದಲು ಹುಟ್ಟುವದೆಂಬುದು ನಿಜವು. ಆದರೆ ಅದರಾಚೆಗೆ ನೀನು ಹೋಗಲಿಕ್ಕೆ ಬೇಕು. ಪುನಃ ತಪಸ್ಸೆಂಬುದೆ ಮಂತ್ರವು. '

ಪುನಃ ಭೃಗುವು ಉತ್ಸಾಹವನ್ನು ಅಳಿಯಗೊಡದೆ ತಪವನ್ನು ನಡೆಸಿದನು. ಆಗ ವಿಜ್ಞಾನವು, ವಸ್ತುಗಳ ಸ್ಪಷ್ಟ ಜ್ಞಾನವು, ಶುದ್ಧ ಮನದಲ್ಲಿ ಆ ವಸ್ತುಗಳ ಸತ್ಯಜ್ಞಾನವು ಎಲ್ಲಕ್ಕೂ ಹೆಚ್ಚಿನದು, ಅದೇ ಬ್ರಹ್ಮವು, ಎಂದು ಅವನ ಕಲ್ಪನೆಯಾಯಿತು. ಆದರೆ ತಂದೆಗೆ ಆ ಪ್ರಕಾರ ಹೇಳಲಾಗಿ ಅವನು ಅಂದದ್ದು, ' ಕಂದಾ, ಇನ್ನು ನೀನು ಧ್ಯೇಯವನ್ನು ಮುಟ್ಟುವಿಯೆಂದು ನನಗೆ ನಂಬಿಗೆಯುಂಟಾಗಿದೆ. ಈಗ ನೀನು ನೋಡಿದ್ದು ವಿಜ್ಞಾನಮಯ ಕೋಶವು. ಅದುರಾಚೆಗೆ ಇನ್ನೂ ಹೋಗಲಿಕ್ಕೆಬೇಕು. ದೃಢಮನಸಿನಿಂದ ಮುಂದೆ ಸಾಗು, ಅಂದರೆ ಅಮೃತಜ್ಞಾನವು ಕೈಸಾರುವದು. ತಪವೆ ಮಾರ್ಗವು. '

ಇನ್ನು ನಾನು ನನ್ನ ದಾರಿಯ ಕೊನೆಯನ್ನು ಬೇಗನೆ ಮುಟ್ಟುವೆನು, ಎಂಬ ಉತ್ಸುಕತೆಯಿಂದ ಪುನಃ ತಪಾಚರಣೆಗೆ ಕುಳಿತ ಭೃಗುಕುಮಾರನು ಆನಂದ-ಮಯ ಕೋಶದ ದಿವ್ಯದರ್ಶನವನ್ನು ಪಡೆದೆ ತನ್ನ ತಂದೆಯ ಬಳಿಗೆ ಹೋದನು. ಆಕಾಶದಲ್ಲಿ ಎಲ್ಲೆಲ್ಲಿಯೂ ಆನಂದವೆ ಆನಂದವು ತುಂಬಿಹೋಗಿರದಿದ್ದರೆ ಯಾವ ವಸ್ತುವೂ ಅಸ್ತಿತ್ವದಲ್ಲಿ ಬರುತಿರಲಿಲ್ಲ, ಎಂಬ ಸತ್ಯವು ಅವನಿಗೆ ಮನದಟ್ಟಾ-ಯಿತು. ಆನಂದದಿಂದಲೆ ವಿಶ್ವವು ಬರುವದು, ಆನಂದದಲ್ಲಿಯೆ ಇರುವದು ಮತ್ತು ಆನಂದದಲ್ಲಿಯೆ ಲಯವಾಗಿ ಹೋಗುವದು, ಎಂಬುದು ಸಿದ್ಧಾಂತವೆಂದು ಅವನು ಗೊತ್ತುಮಾಡಿದನು. ಅವನು ಸಾಕ್ಷಾತ್ಕಾರ ಪಡೆದು ತಂದೆಯ ಬಳಿ ಹೋದನು.

ಅರಳಿದ ತಾವರೆಯಂತೆ ಮೊಗವುಳ್ಳ ತನ್ನ ಮಗುವನ್ನು ಕಂಡು ತಂದೆಗೆ

ಪರಮಸಂತೋಷವಾಯಿತು. ತಂದೆಯು ಅಂದದ್ದು, 'ಬಾಳಾ, ನೀನು ಧನ್ಯನು. ಸತತ ಪ್ರಯತ್ನದಿಂದ ಈ ಮಧುರ ಫಲವನ್ನು ನೀನು ದೊರಕಿಸಿರುವೆ. ಇದು ನಿನ್ನನ್ನು ಹಸಿವೆ ನೀರಡಿಕೆಗಳಾಚೆ ಒಯ್ಯುವದು. ಯಾವುದೇ ಪ್ರಾಣಿಯಾಗಲಿ, ಜೀವವಾಗಲಿ, ತನ್ನ ಇಷ್ಟವಸ್ತುವಿನ ಪ್ರಾಪ್ತಿಯಿಂದ ಆನಂದಿತವಾಗುವದು. ಎಲ್ಲ ಸಾಮಾನ್ಯ ಪ್ರಾಣಿಗಳು ಇಂದ್ರಿಯಸುಖಗಳನ್ನು ಹಾರೈಸುವವು. ವಿಷಯಗಳೆಲ್ಲ ಇಂದ್ರಿಯಕ್ಕೆ ಬೇಕಾದ ವಸ್ತುಗಳು. ಆಯಾ ವಿಷಯಗಳು ದೊರೆತವೆಂದರೆ ಆಯಾ ಇಂದ್ರಿಯಗಳ ಮುಖಾಂತರ ಮನಸಿಗೆ ಸಂತೋಷವುಂಟಾಗುವದು. ಇದು ವಿಷಯಸುಖವು ಅಥವಾ ವಿಷಯಾನಂದವು, ಅಥವಾ ಇಂದ್ರಿಯ ಸುಖವು. ಇದು ಬಾಹ್ಯವಿಷಯಗಳನ್ನವಲಂಬಿಸಿರುವದು. ಇದು ನಶ್ವರವು, ಕ್ಷಣಿಕವು. ಇದು ಎಲ್ಲಕ್ಕೂ ಹೆಚ್ಚಿನ ಆನಂದವಲ್ಲ. ಇದು ಎಲ್ಲಕ್ಕೂ ಕನಿಷ್ಠತರದ ಆನಂದವೆನಬಹುದು. ಇದು ನಿಜಾನಂದದ ನೆಳಲು, ಬರಿ ಭಾಸ ಎಂದೆನಬಹುದು. ಬ್ರಹ್ಮಾನಂದವು ನಿಜಾನಂದವು, ಅಥವಾ ಆತ್ಮಾನಂದವು ನಿತ್ಯವೂ ನಿಸ್ಸೀಮವೂ ಅಪಾರವೂ ನಿರಾಲಂಬವೂ ಇರುವದು. ಸಾಮಾನ್ಯವಾಗಿ ನಾವು ಅನುಭವಿಸುವ ಆನಂದಕ್ಕಿಂತ ಆತ್ಮಾನಂದವು ಶತಕೋಟಿಪಟ್ಟು ಹೆಚ್ಚು ಇರುವದು. ಒಬ್ಬ ಸಿರಿವಂತ ಬಲವುಳ್ಳ ವಿದ್ವಾಂಸ ಯುವಕನ ಆನಂದವು ಒಂದರಷ್ಟು ಎಂದು ಕಲ್ಪಿಸಿದರೆ ಬ್ರಹ್ಮಾನಂದವು ಅದರ ಶತಕೋಟಿ ಸಹಸ್ರ ಪಾಲು ಹೆಚ್ಚು ಶ್ರೇಷ್ಠವಿರುವದು. ಅಂಥ ಆನಂದವು ಸತ್ಯದರ್ಶನವಾದ ನಿಷ್ಕಾಮಿಗೆ ಮಾತ್ರ ಆಗಬಲ್ಲದು. ಮಿಕ್ಕವರಿಗೆ, ವಿಷಯಗಳಲ್ಲಿ ಸಿಲುಕಿಬಿದ್ದವರಿಗೆ ಆಗಲರಿಯದು. ಈಗ ನೀನು ಬ್ರಹ್ಮನ ಎಲ್ಲಕ್ಕೂ ಶ್ರೇಷ್ಠರೂಪವನ್ನು, ಆನಂದರೂಪವನ್ನು ಸಂದರ್ಶಿಸಿರುವಿ. ಬ್ರಹ್ಮವು ಆನಂದರೂಪವೂ ಅಮೃತವೂ ಇರುವದು. ಇನ್ನು ನಿನಗೆ ಭಯವಿಲ್ಲ. ನೀನು ಇನ್ನು ಆಪ್ತಕಾಮನಾಗಿರುವಿ. ಈ ಆನಂದದಿಂದ ಸ್ಫೂರ್ತಿಗೊಂಡು ಸದೈವ ಶ್ರೇಷ್ಠವಾದ ಪರೋಪಕಾರದಲ್ಲಿ ತೊಡಗುವಂಥವನಾಗು.'

ತಂದೆಯ ಆಶೀರ್ವಚನವನ್ನು ಕೇಳಿ ಭೃಗುವು ಕೃತಾರ್ಥನಾದನು. ಇದೇ ಭಾರ್ಗವೀ ವಾರುಣೀ ವಿದ್ಯೆಯೆಂದು ಪ್ರಸಿದ್ಧವಿರುವದು.

# ೧೨. ಕುಮಾರ ನಚಿಕೇತ

ಪೂರ್ವಕಾಲದಲ್ಲಿ ಉಶನ್ ಎಂಬ ಒಬ್ಬ ಸದ್ಗೃಹಸ್ಥನಿರುತ್ತಿದ್ದನು. ಬಡವನಿದ್ದರೂ ಅವನು ಬಹು ಕೀರ್ತಿಕಾಮನು. ತಾನು ಮಹಾದಾನಿ ಎಂಬ ಹೆಸರು ಪಡೆಯುವ ಉದ್ದೇಶದಿಂದ ಅವನು ವಾಜಶ್ರವಸೆಂಬ ಯಜ್ಞವನ್ನು ಹೂಡಿದನು. ಯಜಮಾನನು ತನ್ನ ಸರ್ವಸಂಪತ್ತನ್ನು ದಾನಮಾಡಿ ಬಿಡುವದೇ ಆ ಯಜ್ಞದ ಮುಖ್ಯ ವಿಧಿಯು. ಆದುದರಿಂದ ಆ ಯಜ್ಞಮಾಡುವಾಗ ಉಶನ್ನನು ತನ್ನ ಬಳಿಗೆ ಇದ್ದ ಎಲ್ಲ ಕುರುಡ, ಕುಂಟ, ಮುದಿಮುಪ್ಪು, ಬಡಕು, ಬರಡು ಆಕಳುಗಳನೆಲ್ಲ ದಕ್ಷಿಣೆಯೆಂದು ಋತ್ವಿಕ್ಕುಗಳಿಗೆ ಕೊಟ್ಟುಬಿಟ್ಟನು. ಇವನ ಬಳಿಗೆ ಹೆಚ್ಚಿನದೇನು ಇರಬೇಕು? ಈ ಪರಿಯಿಂದ ಇಂಥ ಮಹಾ ಯಜ್ಞವನ್ನು ಮಾಡುವ ಹವ್ಯಾಸ ಹಿಡಿದ ತನ್ನ ತಂದೆಯನ್ನು ನೋಡಿ ಅವನ ಚಿಕ್ಕ ಮಗನಾದ ನಚಿಕೇತನಿಗೆ ವಿಷಾದವಾಯಿತು. ಇಂಥ ಅನುಪಯುಕ್ತ ಆಕಳುಗಳನ್ನು ದಾನಕೊಟ್ಟರೆ ತನ್ನ ತಂದೆಗೆ ಯಾವ ಪುಣ್ಯವೂ ದೊರೆಯದು, ಕೇವಲ ದೊಡ್ಡ ಯಜ್ಞವನ್ನು ಮಾಡಿದನೆಂದು ಎನಿಸಿಕೊಳ್ಳಬೇಕಾಗಿ ಹೀಗೆ ಮಾಡಿರುವನು ಎಂದು ಭಾವಿಸಿ, ಮಗನು ತಂದೆಗೆ ಅಂದದ್ದು, 'ಅಪ್ಪಾ, ಇಂಥ ಆಕಳುಗಳನ್ನು ದಾನವೆಂದು ಕೊಟ್ಟು ಯಜ್ಞದ ಶ್ರೇಯಸ್ಸನ್ನು ಪಡೆಯಬೇಕೆಂದು ನೀನು ಹಂಬಲಿಸುವಿ. ಆದರೆ ಇದರಿಂದ ಇಷ್ಟಫಲವು ದೊರೆಯುವದುಂಟೇ? ಪುತ್ರನಾದ ನನ್ನನ್ನು ದಾನಕೊಟ್ಟು ಪುಣ್ಯವನ್ನು ಪಡೆಯುವವನಾಗು.'

ತನ್ನ ಮಗನು ಬಾಲ್ಯಸುಲಭವಾದ ಅಜ್ಞಾನದಿಂದ, ಒಂದು ಬಗೆಯ ಹಟದಿಂದ ಹೀಗೆ ಹೇಳುತ್ತಿರುವನೆಂದು ತಂದೆಯು ಅದನ್ನು ದುರ್ಲಕ್ಷಿಸಿದನು. ಆದರೆ ಮಗನು ಅದೇ ಅದೇ ಮಾತನ್ನು ಎರಡು ಮೂರು ಸಾರೆ ಅನ್ನಲು ತಂದೆಯು ಸ್ವಲ್ಪ ಸಿಟ್ಟಿನಿಂದ, 'ದನಕರುಗಳನ್ನು ದಾನಕೊಟ್ಟಂತೆ ಮನುಷ್ಯರನ್ನು ಯಾರಾದರೂ ದಾನಕೊಡುವರೇ? ಹುಚ್ಚ, ಸುಮ್ಮನಿರು' ಎಂದನು.

ನಚಿಕೇತನು ಅಷ್ಟರಿಂದ ತಣ್ಣಗಾಗದೆ, 'ತಾತಾ, ಹಾಗಾದರೆ ನಿನಗೆ ಈ ಯಜ್ಞದಿಂದ ಪುಣ್ಯವು ಹೇಗೆ ಬರಬೇಕು? ನನ್ನನ್ನು ಕೊಟ್ಟರೆ ನಿನಗೆ ಪೂರ್ಣ ಪುಣ್ಯವು ದೊರೆಯುವದು' ಎಂದನು.

ಆಗ ತಂದೆಯು, 'ಏನು ಹಟಮಾರಿ ನೀನು! ಹೋಗುತ್ತ, ನಿನ್ನನ್ನು ಯಮನಿಗೆ ದಾನಕೊಟ್ಟಿರುವೆನು' ಎಂದು ಕೋಪದಿಂದ ನುಡಿದನು.

ಈ ಸಿಟ್ಟಿನ ಮಾತು ಕೇಳಿ, 'ಹಿರಿಯರೇ, ನನ್ನನ್ನು ಇನ್ನೊಬ್ಬರಿಗಾದರೂ ಕೊಟ್ಟಿದ್ದರೆ ನಾನು ಅವರ ಸೇವೆಮಾಡುತ್ತ ಇರುತಿದ್ದೆನು. ನಾನು ಯಮನ ಬಳಿಗೆ ಹೋಗಿ ಮಾಡುವದಾದರೂ ಏನು? ಗಿಡಗಂಟೆಗಳು ಹುಟ್ಟಿ ಸಾಯುವಂತೆ ಮನುಷ್ಯನಾದರೂ ಹುಟ್ಟುಸಾವುಗಳಿಗೀಡು. ನಾನಾದರೂ ಯಮನ ಬಳಿಗೆ ದುಃಖವಿಲ್ಲದೆ ತೆರಳುವೆನು. ಆದರೆ ಯಮನು ನನ್ನಂಥ ಚಿಕ್ಕ ಹುಡುಗನನ್ನು ಕೊಂಡು ಮಾಡುವದೇನು?' ಎಂದು ನಚಿಕೇತನು ನುಡಿದನು.

ಇದಕ್ಕೆ ತಂದೆಯು ಏನೂ ಉತ್ತರ ಕೊಡಲಿಲ್ಲ. ನಚಿಕೇತನು ಮಾತ್ರ ತಂದೆಯ ಅಪ್ಪಣೆಯ ಮೇರೆಗೆ ಹೊರಟನು. ಯಮಧರ್ಮನ ಬಳಿಗೆ ಹೋಗುವದೆಂದೊಡನೆ ಒಂದು ಕ್ಷಣ ಆ ಎಳೆ ಬಾಲಕನ ಮನಸಿನಲ್ಲಿ ಭಯವು ಹುಟ್ಟಿತು. ಆದರೆ ಅವನು ದೃಢಮನಸ್ಕನು. ತಂದೆಯ ಆಜ್ಞೆಯನ್ನು ಮೀರಕೂಡದು, ಅವನ ಯಜ್ಞವನ್ನು ಸಾರ್ಥಗೊಳಿಸಲಕ್ಕೆ ಬೇಕು, ಎಂದು ಗಟ್ಟಿದೆಯಿಂದ ನಚಿಕೇತನು ಯಮನ ಕಡೆಗೆ ಹೋದನು. ಆಗ ಯಮನು ತನ್ನರಮನೆಯಲ್ಲಿರಲಿಲ್ಲ. ಆ ಬಾಲಕನು ಅವನ ಹಾದೀ ಕಾಯುತ್ತ ಹಾಗೆಯೆ ಮೂರು ದಿನ ಯಮರಾಜನ ಬಾಗಿಲಲ್ಲಿ ಕುಳಿತನು. ಯಾರು ಕರೆದರೂ ಒಳಗೆ ಹೋಗಲಿಲ್ಲ, ಅನ್ನನೀರುಗಳನ್ನೂ ತಕ್ಕೊಳ್ಳಲಿಲ್ಲ. ತನ್ನ ತಂದೆಯು ಯಾವನ ಬಳಿಗೆ ತನ್ನನ್ನು ಕಳಿಸಿದ್ದನೋ ಅವನ ಅಪ್ಪಣೆಯಿಲ್ಲದೆ ಏನೂ ಮಾಡಕೂಡದೆಂದು ಅವನು ಹಾಗೆಯೆ ಯಮನನ್ನು ನಿರೀಕ್ಷಿಸುತ್ತ ಕುಳಿತನು.

ಮೂರು ದಿನಗಳ ನಂತರ ಯಮನು ಮನೆಗೆ ಬಂದನು. ಬಾಗಿಲಲ್ಲಿ ಕುಳಿತ ಆ ಬಾಲಮೂರ್ತಿಯನ್ನು ನೋಡಿದನು. ಆ ಕೋಮಲ ಬಾಲಕನ ಮೋರೆಯು ಉಪವಾಸದ ಮೂಲಕ ಸ್ವಲ್ಪ ಕಳೆಗುಂದಿತ್ತು, ಆದರೆ ಕಣ್ಣಿನಲ್ಲಿ ಶ್ರದ್ಧೆ-ನಿಶ್ಚಯ-ನಿಷ್ಠೆಗಳು ಮಿನುಗುತಿದ್ದವು. ಒಡನೆ ಯಮನು ಆ ಬ್ರಹ್ಮಚಾರಿಗೆ ತಕ್ಕ ಸತ್ಕಾರವನ್ನು ಮಾಡಿದನು. ಅವನ ಸತ್ವವನ್ನು ನೋಡಿ ಅತ್ಯಂತ ಪ್ರೀತನಾಗಿ ಯಮದೇವರು, 'ವೀರಬಾಲಕನೇ, ನೀನು ಮೂರು ದಿನ ಇಲ್ಲಿ ವ್ರತಸ್ಥನಾಗಿ ಕುಳಿತಿರುವಿ. ಅಂದ ಬಳಿಕ ದಿನಕ್ಕೆ ಒಂದರಂತೆ ನೀನು ಮೂರು ವರಗಳನ್ನು ಬೇಡುವಂಥವನಾಗು.' ಮೃಗರಾಜನಾದ ಸಿಂಹನು ಅಡವಿಯ ಮೃಗಗಳಿಗೆ ಮಾರಿಯಾದರೂ ತನ್ನ ಮರಿಗಳಿಗೆ ಅಕ್ಕರದ ತಂದೆಯೆ ಇರುವನು. ಹಾಗೆ ಯಮನು ವಿಶ್ವಕ್ಕೆಲ್ಲ ಕರಾಲ ಕಾಲನಂತಿದ್ದರೂ ನಚಿಕೇತನಿಗೆ ವರದ ದೇವತೆಯಾಗಿ ಪರಿಣಮಿಸಿದನು. ಆ ಹಸುಳೆಯ ತೇಜದ ಫಲವದು.

ಪ್ರಸನ್ನನಾದ ಯಮರಾಜನನ್ನು ನೋಡಿ ಆ ಕುಮಾರನು ಅಂದದ್ದು, 'ಯಮಧರ್ಮನೇ, ನೀನು ಈ ಪರಿ ಪ್ರಸನ್ನನಾದ ಬಳಿಕ ನನಗೇನು ಕಡಿಮೆ? ಮರಳಿ ಹೋದ ನನ್ನನ್ನು ನೋಡಿ ನನ್ನ ತಂದೆಯು ಕ್ರೋಧರಹಿತನೂ ನಿಶ್ಚಿಂತನೂ ಪ್ರಸನ್ನನೂ ಆಗಬೇಕು. ಇದೇ ನಾನು ಬೇಡುವ ಮೊದಲನೆಯ ವರವು.'

ಯಮನು ಇದನ್ನು ಕೇಳಿ, 'ಹಾಗೆಯೆ ಆಗುವದು. ಮೃತ್ಯುಮುಖದಿಂದ ಮುಕ್ತನಾದ ನಿನ್ನನ್ನು ನೋಡಿ ನಿನ್ನ ತಂದೆಯು ಬಹಳ ಆನಂದಭರಿತನಾಗುವನು' ಎಂದು ಮಗುವಿಗೆ ಆಶ್ವಾಸನ ಕೊಟ್ಟನು.

'ಅದೇನೋ ಸ್ವರ್ಗಲೋಕವೆಂಬುದಿದೆಯಂತೆ. ಅಲ್ಲಿ ಮುಪ್ಪು, ಸಾವುಗಳಿಲ್ಲ, ಹಸಿವೆ ನೀರಡಿಕೆಗಳಿಲ್ಲ, ಭಯಶೋಕಗಳಿಲ್ಲ, ಅಲ್ಲಿ ನಿನ್ನ ಕಾಟವಿಲ್ಲ
ಅಲ್ಲಿ ದುಃಖರಹಿತ ಸುಖವನ್ನು ಅನುಭವಿಸುವರೆಂದು
ಎಲ್ಲರೂ ಹೇಳುತ್ತಾರೆ. ಅಂಥ ಸ್ವರ್ಗವು ಪ್ರಾಪ್ತವಾಗಬೇಕಾದರೆ ಏನು ಮಾಡಬೇಕು, ಯಾವ ಮಾರ್ಗದಿಂದ ಹೋಗಬೇಕು, ಇದನ್ನು ಹೇಳುವ ಕೃಪೆ ಮಾಡು' ಎಂದು ನಚಿಕೇತನು ಎರಡನೆಯ ವರದಿಂದ ಬೇಡಿಕೊಂಡನು.

ಆಗ ಯಮನು ಅಂದದ್ದು, 'ಪ್ರಿಯ ನಚಿಕೇತನೇ, ಒಳ್ಳೆ ಪ್ರಶ್ನೆಯನ್ನು ಕೇಳಿದೆ. ಈ ಲೋಕದಲ್ಲಿಯ ಸರ್ವರೂ ಸ್ವರ್ಗಲೋಕವನ್ನು ಪ್ರಾರ್ಥಿಸುವರು. ಯಜ್ಞಯಾಗಾದಿ ಕರ್ಮಗಳಿಂದ, ಪುಣ್ಯಕರ್ಮಗಳಿಂದ ಕಾಮ್ಯಬುದ್ಧಿಯಿಂದ ಮಾಡಿದ ಎಲ್ಲ ಸತ್ಕಾರ್ಯಗಳಿಂದ ಮತ್ತು ಲೋಕಹಿತದ ಕಾರ್ಯಗಳಿಂದ ಆ ಲೋಕವು ಪ್ರಾಪ್ತವಾಗುವದು. ಯಜ್ಞವಿಧಿಗಳಿಗೆ ಅಗ್ನಿಯೆ ಮುಖ್ಯವು. ಅಗ್ನಿಯ ಮುಖಾಂತರವೆ ಆಹುತಿ ಕೊಟ್ಟು ಜನರು ಸ್ವರ್ಗವನ್ನು ಪಡೆಯುವರು. ಅನೇಕ ಬಗೆಯ ಯಜ್ಞಗಳಿರುವವು. ಅವುಗಳಲ್ಲಿ ದ್ರವ್ಯಯಜ್ಞವೆಂಬುದೊಂದೆ ಅಗ್ನಿಯ ಮುಖಾಂತರ ಮಾಡತಕ್ಕ ಯಜ್ಞವು. ತಪೋಯಜ್ಞ, ಸಂಯಮಯಜ್ಞ, ಜ್ಞಾನಯಜ್ಞ ಹೀಗೆ ಬಹುವಿಧ ಯಜ್ಞಗಳಿದುವವು. ಶ್ರೇಷ್ಠತರ ವಸ್ತುಗಳನ್ನು ಪಡೆಯುವದಕ್ಕಾಗಿ ಹೀನತರ ವಸ್ತುಗಳ ತ್ಯಾಗಮಾಡುವದೆ ಯಜ್ಞದ ಮೂಲ ತತ್ವವು. ನೀನು ಈ ಪ್ರಶ್ನೆಯನ್ನು ಕೇಳಿರುವಿಯಾದುದರಿಂದ ಯಜ್ಞಮುಖವಾದ ಅಗ್ನಿಗೆ ಇನ್ನುಮುಂದೆ ನಚಿಕೇತ ಅಗ್ನಿ ಎಂಬ ಹೆಸರು ಆಗುವದು. ಇದು ಎರಡನೆಯ ವರವಾಯಿತು. ನೀನು ಇನ್ನು ಮೂರನೆಯ ವರವನ್ನು ಬೇಡಬಹುದು.'

ಇದನ್ನು ಕೇಳಿ ನಚಿಕೇತನು ಪ್ರಫುಲ್ಲಚಿತ್ತನಾಗಿ ಅಂದದ್ದು, 'ಯಮ ದೇವರೇ, ನಿನ್ನ ಅನುಗ್ರಹವು ಹೆಚ್ಚಿನದು. ಇನ್ನು ಮೂರನೆಯ ವರವನ್ನು ಕೇಳುವೆನು. ಮನುಷ್ಯನು ಸತ್ತ ಬಳಿಕ ಅವನ ಜೀವಾತ್ಮನು ಇರುವನೆಂದು ಕೆಲವರು, ದೇಹವಳಿದ ಬಳಿಕ ಜೀವಾತ್ಮನು ಇರುವದಿಲ್ಲವೆಂದು ಅನ್ಯರು ಅನ್ನುವರು. ಈ ಎರಡರಲ್ಲಿ ನಿಜವು ಅವುದು, ಈ ಬಗ್ಗೆ ನೀನು ನನಗೆ ಹೇಳಬೇಕು.'

ಆ ಚಿಕ್ಕ ಮಗುವಿನ ಬಾಯಿಂದ ಈ ಗೂಢ ಗಂಭೀರ ಪ್ರಶ್ನೆಯನ್ನು ಕೇಳಿ ಯಮನು ಬೆರಗಾದನು. ಅವನು ಅಚ್ಚರಿಯಿಂದ, 'ನಚಿಕೇತನೇ, ನೀನೂ ಚಿಕ್ಕ ಹುಡುಗರಂತೆಯೆ ಇರುವಿ, ಎಂದು ಮಾಡಿದ್ದೆನು. ಆದರೆ ನಿನ್ನಲ್ಲಿ ವಿಲಕ್ಷಣವಾದ ಸಾಹಸ ಮತ್ತು ಜ್ಞಾನಜಿಜ್ಞಾಸೆಗಳು ಕಂಡುಬರುತಿರುವವು. ನೀನು ಈಗ ಕೇಳಿದ ಪ್ರಶ್ನೆಯನ್ನು ದೇವತೆಗಳು ಚರ್ಚಿಸಿ ದಣಿದರು. ಅವರಿಗೆ ಯಾವ ನಿರ್ಣಯವೂ ಹೊಳೆಯಲಿಲ್ಲ. ಇದು ಬಹಳ ಸೂಕ್ಷ್ಮ ಪ್ರಶ್ನೆಯು. ಆದುದರಿಂದ ನೀನು ಬೇರೆ ಯಾವದೊಂದು ಪ್ರಶ್ನೆಯನ್ನು ಕೇಳು. ಈ ಪ್ರಶ್ನೆಯ ಭರಕ್ಕೆ ಬೀಳಬೇಡ' ಎಂದನು.

ಇದನ್ನು ಕೇಳಿ ನಚಿಕೇತನು ನಿರುತ್ಸಾಹನಾಗದೆ, 'ಮಹಾರಾಜನೇ, ನೀನು ಹೇಳುವಂತೆ ದೇವತೆಗಳು ಈ ಪ್ರಶ್ನೆಯನ್ನು ಚರ್ಚಿಸಿ ದಣಿದಿದ್ದರೆ ನಾನಾದರೂ ಬೇರೆ ಪ್ರಶ್ನೆ ಕೇಳಿ ಏನು ಮಾಡಲಿ? ಈ ಮಹತ್ವದ ಪ್ರಶ್ನೆ ಯನ್ನು ಬಿಟ್ಟು ಮಿಕ್ಕ ಪ್ರಶ್ನೆಗಳನ್ನು ನಾನೇನು ಕೇಳಲಿ? ಈ ಪ್ರಶ್ನೆಗೆ ನಿನ್ನನ್ನುಳಿದು ಯೋಗ್ಯ ಉತ್ತರವನ್ನು ಕೊಡುವವರಾದರೂ ಯಾರು? ಇದೇ ಪ್ರಶ್ನೆಯ ಉತ್ತರವನ್ನು ನನಗೆ ದಯಪಾಲಿಸಬೇಕು' ಎಂದು ಹಟ ಹಿಡಿದನು.

ಆಗ ಆ ಹುಡುಗನ ಮನವೊಲಿಸಬೇಕೆಂದು ಪುನಃ ಯಮನು ಅಂದದ್ದು, 'ಮಗುವೇ, ದೀರ್ಘಾಯುಷ್ಯವನ್ನು, ಪುತ್ರಪೌತ್ರರನ್ನು, ಸಿರಿಸಂಪತ್ತು ದನಕರ ಗಳನ್ನು, ಸಮೃದ್ಧಿಯನ್ನು ಮುಂತಾದವುಗಳನ್ನು ಬೇಡು, ನಾನು ನಿನಗೆ ಅವುಗಳನೆಲ್ಲ ಸಂತೋಷದಿಂದ ಕೊಡುವೆನು. ನೀನು ಬೇಡಿದರೆ ಈ ಇಡೀ ಪೃಥಿವಿಯ ಸಾಮ್ರಾಜ್ಯವನ್ನಾದರೂ ನಾನು ನಿನಗೆ ಧಾರೆಯೆರೆಯುವೆನು. ಅನೇಕ ಅಪ್ಸರೆಯರನ್ನು ನಿನ್ನ ಸೇವೆಗೆ ಕೊಡುವೆನು. ಬೇಕಾದ ಐಶ್ವರ್ಯ, ಭೋಗಾದಿಗಳನ್ನು ನಿನಗೆ ಈಡು ಮಾಡುವೆನು. ಇಕೋ ಈ ರಥಗಳ ಸಾಲು, ಈ ಆನೆ ಒಂಟೆಗಳ ಸಮೂಹ, ಈ ಗೀತವಾದ್ಯಗಳಲ್ಲಿ ಪ್ರವೀಣರಾದ ಸುಂದರಿ

ಯರ ಗುಂಪು, ನಿನಗೆ ಬೇಕಾದಷ್ಟು ಆಯುಷ್ಯ ಇವೆಲ್ಲವುಗಳನ್ನು ಸ್ವೀಕರಿಸು, ಒಲ್ಲೆನಬೇಡ. ಈ ಪ್ರಶ್ನೆಯನ್ನು ಮಾತ್ರ ಕೇಳಬೇಡ.'

ನಚಿಕೇತನಿಗೆ ಒಳ್ಳೆ ಕಠಿಣ ಪ್ರಸಂಗವು ಎದುರಾಯಿತು. ಒಂದು ಬದಿಗೆ ಸಕಲ ಸಾಮ್ರಾಜ್ಯಸುಖ, ಇನ್ನೊಂದು ಬದಿಗೆ ಜ್ಞಾನ, ಹೀಗೆ ಎರಡರ ನಡುವೆ ಯಾವುದನ್ನು ಆರಿಸಬೇಕು, ಎಂಬುದೆ ಅವನಿಗೆ ಬಿದ್ದ ಪ್ರಶ್ನೆಯು. ನಚಿಕೇತನು ವೈಭವದಾಶೆಗೆ ಮರುಳಾಗಲಿಲ್ಲ, ಸಾಮ್ರಾಜ್ಯಸುಖದ ಮೋಹಕ್ಕೆ ಒಳಗಾಗಲಿಲ್ಲ. ಒಂದು ಕ್ಷಣದ ಮಟ್ಟಿಗೆ ಸಹ ಅವನು ತನ್ನ ಧ್ಯೇಯವನ್ನು ಬಿಟ್ಟು ಕದಲಲಿಲ್ಲ. ಅವನು ಅಂದದ್ದು, 'ಯಮಧರ್ಮನೇ, ಮನುಷ್ಯನ ಬಾಯಿಗೆ ನೀರು ಬಿಡುವಂಥ ಎಲ್ಲ ಐಶ್ವರ್ಯದ ಆಶೆಯನ್ನು ನೀನು ನನಗೆ ತೋರಿಸಿದಿ. ಆದರೆ ಇವೆಲ್ಲ ಭಂಗುರ ಸುಖಗಳು. ಈಹೊತ್ತಿದ್ದರೆ ನಾಳೆ ಇಲ್ಲ, ಹೀಗೆ ಇವುಗಳ ಗತಿಯು. ದಿನದಿನಕ್ಕೆ ಮನುಷ್ಯನ ತೇಜವು ಭೋಗದಿಂದ ಸವೆದು ಕೊನೆಗೆ ಪೂರ್ಣ ಕ್ಷೀಣವಾಗಿ ಹೋಗುವದು. ಮನುಷ್ಯನ ಇಹಲೋಕದ ವಾಸವು ಮುಗಿದ ಬಳಿಕ ಈ ಸಿರಿಸಂಪತ್ತೆಲ್ಲ ನಿನ್ನದಾಗಿಯೆ ಉಳಿಯುವದು. ಮನುಷ್ಯನ ಅಂತಃಕರಣದಲ್ಲಿಯ ಸತ್ಯದ ಹಸಿವು ಧನಕನಕಗಳಿಂದ ಹಿಂಗಲಾರದು. ಇದಲ್ಲದೆ, ನಿನ್ನ ಅನುಗ್ರಹವಿದ್ದ ಬಳಿಕ ಆಯುಷ್ಯ, ಧನ, ಸಂಪತ್ತು ಇವು ನನಗೆ ಬೇಕಾದಷ್ಟು ಸಿಕ್ಕಬಲ್ಲವು. ಆದರೆ ಈಗ ನನ್ನ ನಿನ್ನ ಭೆಟ್ಟಿಯಾದಾಗ ನೀನು ವರವನ್ನು ಬೇಡು ಎಂದು ಹೇಳಿದಾಗ, ನಾನು ನಿನಗೆ ಈ ಪ್ರಶ್ನೆಯನ್ನು ಕೇಳದಿದ್ದರೆ ಇದರ ಉತ್ತರವನ್ನು ಇನ್ನಾರು ಕೊಡಬಲ್ಲರು? ಇನ್ನಾರು ಈ ನನ್ನ ಜಿಜ್ಞಾಸೆಯನ್ನು ತೃಪ್ತಿಬಡಿಸಬಲ್ಲರು? ಈ ನನ್ನ ನೀರಡಿಕೆಯನ್ನು ಇನ್ನಾರು ತಣಿಸಬಲ್ಲರು? ಜ್ಞಾನಾನಂದದ ರುಚಿಗಂಡವನು ನೀನು ಕೊಡ ಮಾಡಿದ ಕ್ಷಣಭಂಗುರ ಸುಖಗಳಿಂದ ಎಂದೂ ತೃಪ್ತನಾಗಲಾರನು. ಆದುದರಿಂದ ಜ್ಞಾನಿಯೇ, ನಾನು ಕೇಳಿದ ಗೂಢಪ್ರಶ್ನೆಯ ಉತ್ತರವನ್ನು ಕೊಟ್ಟು ನನ್ನ ಆತ್ಮವನ್ನು ತುಷ್ಟಮಾಡು. ನನಗೆ ಎರಡನೆಯದೇನೂ ಬೇಡ.'

ಕುಮಾರನ ಆ ದೃಢನಿಶ್ಚಯವನ್ನು ನೋಡಿ ಯಮನು ಅತ್ಯಂತ ಪ್ರಸನ್ನನಾದನು. ತನಗೆ ಇಂಥ ಉತ್ತಮ ಶಿಷ್ಯನು ದೊರಕಿದನು, ಎಂಬ ಬಗ್ಗೆ ಅವನಿಗೆ ಹರ್ಷವಾಯಿತು. ಅವನು ಅಂದದ್ದು, 'ಪ್ರಿಯ ಶಿಷ್ಯನೇ, ಈ ಜಗತ್ತಿನಲ್ಲಿ ಪ್ರೇಯ-ಇಂದ್ರಿಯಸುಖ ಅಥವಾ ಭಂಗುರಸುಖ ಮತ್ತು ಶ್ರೇಯ—ನಿತ್ಯಸುಖ ಅಥವಾ ಆತ್ಮಸುಖ, ಹೀಗೆ ಇಬ್ಬಗೆಯ ಸುಖಗಳಿರುವವು.

ಯಾವಾಗಲೂ ಇವೆರಡರಲ್ಲಿ ಒಂದರ ಕಾಂಕ್ಷೆಯಿಂದ ಮನುಷ್ಯನು ಕರ್ಮ ಮಾಡಲು ಪ್ರವೃತ್ತನಾಗುವನು. ಶ್ರೇಯಸ್ಸಿನ ಪ್ರೇರಣೆಯಿಂದ ಆಚರಿಸುವವನು ಕಲ್ಯಾಣವನ್ನು ಪಡೆಯುವನು. ಪ್ರೇಯಸ್ಸಿಗೆ ಬಲಿಬೀಳುವವನು ಭಂಗುರಸುಖಗಳ ಬೆನ್ನು ಹತ್ತಿ ಬಳಲುವನು. ಬುದ್ಧಿವಂತನು, ಧೀರನು ಯಾವಾಗಲೂ ಪ್ರೇಯಸ್ಸಿನ ಪ್ರೇರಣೆಯನ್ನು ಬದಿಗೊತ್ತಿ ಶ್ರೇಯಸ್ಸನ್ನು ಹಿಂಬಾಲಿಸುವನು. ಮೂಢರು, ಅಲ್ಪಮತಿಗಳು ತಾತ್ಕಾಲಿಕ ನಶ್ವರ ಇಂದ್ರಿಯ ಸುಖದ ಅಭಿಲಾಷೆಯಿಂದ ವಿಷಯಭೋಗಗಳಲ್ಲಿ ನಿಮಗ್ನರಾಗುವರು. ನಾನು ನಿನಗೆ ಐಶ್ವರ್ಯದ ಸುಖರಾಶಿಗಳನ್ನು ಕೊಡಮಾಡಿದರೂ ಅವುಗಳನ್ನು ಸ್ವೀಕರಿಸದೆ ನಿತ್ಯನಿರಂತರ ಸುಖವನ್ನೆ ನೀನು ನಿನ್ನ ಗುರಿಯಾಗಿಟ್ಟುಕೊಂಡೆ. ನೀನು ನಶ್ವರ ಅವಿದ್ಯೆಗೆ ಮರುಳಾಗದೆ ನಿತ್ಯವಿದ್ಯೆಯನ್ನೆ ಏಕಮನಸ್ಸಿನಿಂದ ಅಪೇಕ್ಷಿಸಿದೆ. ಹಲವರು ಈ ವಿಷಯಸುಖಗಳೆ ಹೆಚ್ಚಿನವೆಂದು ತಿಳಿದು ಪುನಃ ಪುನಃ ನನಗೆ ವಶರಾಗಿ ಜನ್ಮಮರಣ ಚಕ್ರದಲ್ಲಿ ಸುತ್ತಾಡುವರು. ಆತ್ಮಸುಖವನ್ನೆ ಗುರಿಯಾಗಿಟ್ಟುಕೊಂಡು ನಿಷ್ಠೆಯಿಂದ ನಡೆಯುವ ಧೀರರು ವಿರಳ. ನೀನು ಆ ವಿರಳರಲ್ಲಿ ಒಬ್ಬನು, ಮೃಗಜಲವನ್ನು ಬಿಟ್ಟು ನಿಜಜಲವನ್ನು ಬೆನ್ನಟ್ಟಿದವನು. ನೀನು ಈಗ ಕೇಳಿದ ಪ್ರಶ್ನೆಯು ಬಹಳ ಗಹನವಾದದ್ದು. ಅದರ ಉತ್ತರವನ್ನು ಹೇಳುವವರು ಕಡಿಮೆ. ಅದು ಕೇವಲ ತರ್ಕದಿಂದ ತಿಳಿಯಲಾರದು. ಸಾಕ್ಷಾತ್ಕಾರಿಗಳೆ ಈ ಆತ್ಮತತ್ವವನ್ನು ಅರಿಯುವರು ಮತ್ತು ಅವರೇ ಅದನ್ನು ಉಪದೇಶಿಸಬಲ್ಲರು. ನೀನು ಕೇಳುವ ಪ್ರಶ್ನೆಯು ಸಾಮಾನ್ಯವಲ್ಲ. ನೀನು ಆತ್ಯಂತಿಕ ಸತ್ಯವಾದ ಆತ್ಮನ ಸ್ವರೂಪವನ್ನು ಕೇಳುತಿರುವಿ. ದೇಹವು ವಿನಾಶಿಯು, ಅದರಲ್ಲಿಯ ಆತ್ಮನು ಅವಿನಾಶಿಯು, ಅಮರನು. ಆ ಆತ್ಮನೇ ಸರ್ವ ವೇದಗಳ ಗುರಿಯು, ಬಗೆಬಗೆಯ ತಪಸ್ಸುಗಳಿಂದ ದೊರಕಿಸಬೇಕೆಂದು ಮುನಿಗಳು ಹವಣಿಸುತಿರುವ ವಸ್ತು ಅದೇ. ಆ ಆತ್ಮನನ್ನೆ ಗುರಿಯಾಗಿಟ್ಟುಕೊಂಡು ಸಾಧಕರು ಬ್ರಹ್ಮಚರ್ಯವ್ರತವನ್ನು ಪಾಲಿಸುವರು. ಆತ್ಮನು ಹುಟ್ಟುಸಾವುಗಳಿಲ್ಲದವನು, ಅವನು ಶಾಶ್ವತನು. ಅವನು ಅಣುವಿಗಿಂತ ಅಣುವು, ಮಹತ್ತಿಗಿಂತ ಮಹತ್ತನು. ಅವನು ಸರ್ವಾಂತರ್ಯಾಮಿಯು, ಎಲ್ಲೆಲ್ಲಿಯೂ ವ್ಯಾಪ್ತನು. ಅವನು ಪ್ರವಚನಾದಿಗಳಿಂದ, ತರ್ಕದಿಂದ, ಬರಿಯ ಬುದ್ಧಿಯಿಂದ ಲಭ್ಯನಲ್ಲ. ಅವನು ಸ್ವತಃ ಶರೀರರಹಿತನು. ದುಷ್ಕರ್ಮಗಳನ್ನು ಬಿಟ್ಟವನೂ ಶಾಂತಮನಸ್ಕನೂ ಏಕಾ

ರಹಿತನೂ ನಿಷ್ಕಾಮನೂ ಆದವನೆ ತನ್ನ ತೀವ್ರಬುದ್ಧಿಯ ಸಹಾಯದಿಂದ ಆತ್ಮನ ಯಥಾರ್ಥ ಸ್ವರೂಪವನ್ನರಿಯಬಲ್ಲನು. ನಿಜವಾಗಿ ಆತ್ಮಸಾಕ್ಷಾತ್ಕಾರ ವಾಗಬೇಕಾದರೆ ಆತ್ಮನ ಅನುಗ್ರಹವೆ ಬೇಕು ಎನಬಹುದು. ಮನುಷ್ಯನು ಸತತ ಪ್ರಯತ್ನ ಮಾಡುತಿರಲು ಅವನ ಮೇಲೆ ಈ ಅನುಗ್ರಹವು ಆಗುವದು.

ಹೇ ನಚಿಕೇತನೇ, ಆತ್ಮನು ಶಬ್ದಾದಿ ವಿಷಯಗಳಂತೆ ನಮ್ಮ ಇಂದ್ರಿಯ ಗಳಿಗೆ ಗೋಚರನಾಗನು. ಇಂದ್ರಿಯಗಳು ದ್ವೈತಸೃಷ್ಟಿಯನ್ನು ಮಾತ್ರ ಗುರುತಿಸಬಲ್ಲವು. ಇಂದ್ರಿಯ ವಿಷಯಗಳು ಇಂದ್ರಿಯಗಳಾಚೆಗೆ ಇರುವವು; ವಿಷಯಗಳಿಗಿಂತ ಮನಸು ಹೆಚ್ಚಿನದು. ಬುದ್ಧಿಯು ಮನಸಿಗಿಂತ ಶ್ರೇಷ್ಠವು; ಬುದ್ಧಿಗಿಂತ ಅವ್ಯಕ್ತವು ಹೆಚ್ಚಿನದು. ಅವ್ಯಕ್ತಕ್ಕೂ ಪರಮಪುರುಷನು ಹಿರಿಯನು. ಅವನಿಗಿಂತ ಶ್ರೇಷ್ಠರಾರೂ ಇಲ್ಲ. ಅವನೇ ಆತ್ಯಂತಿಕ ವಸ್ತುವು. ಅವನೇ ಸರ್ವ ವಸ್ತುಗಳಲ್ಲಿ ಗೂಢನಾಗಿ ಇರುವನು. ಅವನನ್ನೇ ನಾವು ತಿಳಿದು ಕೊಳ್ಳತಕ್ಕದ್ದು. ನಾವು ನಮ್ಮ ವಾಣಿಯನ್ನು ಮನಸಿನಲ್ಲಿ, ಮನಸನ್ನು ಬುದ್ಧಿ ಯಲ್ಲಿ ಅಥವಾ ಜ್ಞಾನಶಕ್ತಿಯಲ್ಲಿ, ಅದನ್ನು ಅವ್ಯಕ್ತದಲ್ಲಿ, ಮುಂದೆ ಅದನ್ನು ಶಾಂತಾತ್ಮನಲ್ಲಿ ಸ್ಥಿರಪಡಿಸಬೇಕು. ಇದೇ ಲಯಯೋಗವೆನಿಸುವದು. ಏಳು, ಎದ್ದೇಳು. ನಿನಗೆ ಆತ್ಮಸಾಕ್ಷಾತ್ಕಾರವು ಬೇಕಾಗಿದ್ದರೆ, ಆತ್ಮನು ಎಲ್ಲಿರುವನು, ಹೇಗಿರುವನು, ಮರಣ ಪಶ್ಚಾತ್ ಅವನು ಎಲ್ಲಿ ಹೋಗುವನು, ಎಂಬ ಮಂತಾದ ಪ್ರಶ್ನೆಗಳ ಉತ್ತರವು ನಿನಗೆ ಬೇಕಾಗಿದ್ದರೆ ಈ ಯೋಗಮಾರ್ಗವನ್ನು ಅನು ಸರಿಸು. ಈ ಯೋಗವನ್ನು ಸಾಧಿಸುವಾಗ ಇಂದ್ರಿಯಪ್ರವೃತ್ತಿಗಳು ನಿನಗೆ ಅಡ್ಡಬರಬಹುದು. ಆದರೆ ಅವುಗಳನ್ನು ಚನ್ನಾಗಿ ಸಂಯಮಿಸು. ಈ ಶರೀರವು ಒಂದು ರಥವಿದ್ದಂತೆ. ಇಂದ್ರಿಯಗಳೇ ಇದಕ್ಕೆ ಹೂಡಿದ ಕುದುರೆ ಗಳು. ಬುದ್ಧಿಯೇ ಸಾರಥಿಯು. ಈ ರಥದಲ್ಲಿ ಕುಳಿತವನೇ ಆತ್ಮನು. ಈ ಕುದುರೆಗಳನ್ನು ಚನ್ನಾಗಿ ವಶದಲ್ಲಿಟ್ಟುಕೊಂಡು ಸಾಗಿದರೆ ರಥಿಕನು ಸ್ವ- ಸ್ವರೂಪಸಾಕ್ಷಾತ್ಕಾರ ಪಡೆದು ನಿರತಿಶಯ ಆನಂದದಲ್ಲಿ ನಿಮಗ್ನನಾಗುವನು. ಹಾಗೆ ಮಾಡದೆ ಕುದುರೆಗಳನ್ನು ಸಿಕ್ಕ ಸಿಕ್ಕ ಹಾಗೆ ಹರಿಬಿಟ್ಟರೆ ಮನುಷ್ಯನು ಈ ಸಂಸಾರ ದುಃಖಗಳಲ್ಲಿ ಸಿಕ್ಕು ತೊಳಲಾಡುವನು.

'ಬಾಳಾ, ನಿನಗೆ ಬೇಕಾದ ಜ್ಞಾನವನ್ನೂ ಅದನ್ನು ಸಾಕ್ಷಾತ್ಕರಿಸುವ ರೀತಿಯಾದ ಯೋಗವಿಧಿಯನ್ನೂ ಪೂರ್ಣವಾಗಿ ಈಗ ನಾನು ಹೇಳಿರುವೆನು. ಅದನ್ನು ಚನ್ನಾಗಿ ಅರಿತುಕೊಂಡು ನೀನು ಮುಕ್ತನಾಗು. ನಿಜಜ್ಞಾನದಲ್ಲಿ

ನೆಲೆಯಾಗಿ ನಿಂತು ಪರಮಪದವನ್ನು, ನಿರಂಜನಸುಖವನ್ನು ಭೋಗಿಸು ವವನಾಗು.'

ನಚಿಕೇತನು ಆ ದಿವ್ಯಪುರುಷನ ಬಾಯಿಂದ ಬಂದ ಈ ಶ್ರೇಷ್ಠ ಉಪದೇಶ ವನ್ನು ಕೇಳಿ ತೃಪ್ತನಾದನು. ಅವನ ಮುಖದ ಮೇಲೆ ಬ್ರಹ್ಮತೇಜವು ಮಿಂಚ ತೊಡಗಿತು. ಎಳೆ ಬಾಲಕನಾದರೂ ಅವನು ಗಂಭೀರನಂತೆ ಕಂಗೊಳಿಸ ಲಾರಂಭಿಸಿದನು. ಯಮಧರ್ಮನಿಂದ ಆಶೀರ್ವದಿಸಲ್ಪಟ್ಟನಂತರ ಅವನು ತನ್ನ ತಂದೆಯ ಬಳಿಗೆ ಮರಳಿ ಬಂದನು.

ಮರಣದ ಬಾಯಿಂದ ಬದುಕಿ ಬಂದ ಬಾಲಕನನ್ನು ಕಂಡು ತಂದೆಗೆ ಹಿಡಿಸಲಾರದಷ್ಟು ಹರ್ಷವಾಯಿತು. ಮಗನನ್ನು ಕಂಡು 'ನಾನು ಎಂತಹ ಪಾಪಿ! ಎಂತಹ ಹಸುಳೆಯನ್ನು ನಾನು ಸಿಟ್ಟಿನ ಭರದಲ್ಲಿ ತಳ್ಳಿ ಯಮಸದನಕ್ಕೆ ಕಳುಹಿದೆನು?' ಎಂದು ಪಶ್ಚಾತ್ತಾಪಬಟ್ಟು, ನಮ್ರಭಾವದಿಂದ ತನ್ನ ಪಾದಕ್ಕೆರಗಿದ ನಚಿಕೇತನನ್ನು ಉಶನ್ನನು ಎತ್ತಿ ತಬ್ಬಿ ಅಪ್ಪಿಕೊಂಡು ಮುದ್ದಾಡಿ ಆನಂದಾಶ್ರುಗಳನ್ನು ಸುರಿಸಿದನು. ನಚಿಕೇತನು ನಿರ್ವ್ಯಾಜ ಪ್ರೇಮದಿಂದ ಮತ್ತು ಕುತೂಹಲಭರದಿಂದ ಯಮಪಟ್ಟಣದಲ್ಲಿ ನಡೆದ ಎಲ್ಲ ಸಂಗತಿಗಳನ್ನು ಹೇಳಲು ತಂದೆಗೆ ತನ್ನ ಅಹಂಕಾರ, ಮೂಢತನ, ಶೀಘ್ರಕೋಪ ಇವುಗಳ ಬಗ್ಗೆ ವಿಷಾದವೂ ತನ್ನ ಮಗನ ಶ್ರದ್ಧೆ, ವಿರಾಗ, ಗೂಢ ಗಂಭೀರಭಾವ, ಸಾಹಸ, ನಿಷ್ಠೆ, ಜಿಜ್ಞಾಸೆ ಇವುಗಳ ಬಗ್ಗೆ ವಿಸ್ಮಯವೂ ಆಯಿತು.

ಅಂದಿನಿಂದ ತಂದೆಯೆ ಮಗನ ಶಿಷ್ಯನಾಗಿ ಬ್ರಹ್ಮವಿದ್ಯೆಯನ್ನು ಕಲಿತು ಧನ್ಯನಾದನು. ಕುಲದೀಪಕನಾದ ನಚಿಕೇತನು ಇಹಪರಲೋಕಗಳನ್ನು ಸಾಧಿಸುವ ಜ್ಞಾನ ಮತ್ತು ಯೋಗವಿಧಿ ಇವುಗಳನ್ನು ಯಮನ ಕಡೆಯಿಂದ ಈ ಲೋಕಕ್ಕೆ ತಂದು ಮಾನವರ ಮೇಲೆ ದೊಡ್ಡ ಉಪಕಾರವನ್ನು ಮಾಡಿದನು.

## ೧೩. ಆರು ಪ್ರಶ್ನೆಗಳು

ಭಾರದ್ವಾಜ, ಸತ್ಯಕಾಮ, ಗಾರ್ಗ್ಯ, ಆಶ್ವಲಾಯನ, ವೈದರ್ಭಿ, ಕಾತ್ಯಾಯನ ಎಂಬ ಆರು ತರುಣ ಜನರು ಒಳ್ಳೆ ಬ್ರಹ್ಮನಿಷ್ಠರೂ ಪೂರ್ಣ ಬ್ರಹ್ಮಜ್ಞಾ-

ನದ ತೀವ್ರ ಇಚ್ಛೆಯುಳ್ಳವರೂ ಇದ್ದರು. ಪಿಪ್ಪಲಾದನೆಂಬ ಮುನಿಯು ಪೂರ್ಣ ಬ್ರಹ್ಮಜ್ಞಾನಿಯಿರುವನೆಂಬ ಮಾತನ್ನು ಕೇಳಿ ಅವರೆಲ್ಲರೂ ಶಿಷ್ಯರಾಗಿ ಅವನೆಡೆಗೆ ಹೋದರು. ಅವರ ಉದ್ದೇಶವನ್ನರಿತುಕೊಂಡು ಮುನಿಯು ಅವರಿಗೆ ಅಂದದ್ದು, 'ಕುಮಾರರೇ, ನೀವು ಬ್ರಹ್ಮಜಿಜ್ಞಾಸುಗಳಿರುವಿರೆಂಬ ಬಗ್ಗೆ ನನಗೆ ಏನೂ ಸಂಶಯವಿಲ್ಲ. ಆದರೆ ಒಂದು ವರ್ಷದ ಮಟ್ಟಿಗೆ ಇಲ್ಲಿ ನನ್ನೊಡನೆ ಶ್ರದ್ಧಾಪೂರ್ವಕ ತಪಸ್ಸು ಮಾಡುತ್ತ ಬ್ರಹ್ಮಚರ್ಯವ್ರತದಿಂದ ಇರುವಂಥವ ರಾಗಿರಿ. ಬಳಿಕ ಬೇಕಾದ ಪ್ರಶ್ನೆಗಳನ್ನು ಕೇಳಿರಿ. ನನಗೆ ಗೊತ್ತಿದ್ದ ಮಟ್ಟಿಗೆ ಎಲ್ಲ ವಿದ್ಯೆಗಳನ್ನು ಹೇಳಿ ನಿಮ್ಮ ಸಂಶಯಗಳನ್ನು ಪರಿಹರಿಸುವೆನು.' ಗುರುಗಳ ಈ ಆಜ್ಞೆಯನ್ನು ಕೇಳಿ ಆ ಆರೂ ಜನರು ಅಲ್ಲಿ ಒಂದು ವರ್ಷದ ಮಟ್ಟಿಗೆ ಇದ್ದರು. ನಿತ್ಯನೇಮಗಳಿಂದಲೂ ಆತ್ಮಸಂಯಮನದಿಂದಲೂ ಚಿತ್ತವನ್ನು ಶುದ್ಧೀಕರಿಸಿದರು. ಬ್ರಹ್ಮಚಿಂತನದಲ್ಲಿ ಕಾಲಕಳೆಯುತ್ತ ಬುದ್ಧಿಯನ್ನು ತೀವ್ರಗೊಳಿಸುವಂಥವರಾದರು.

ಒಂದು ವರ್ಷವು ಮುಗಿಯಿತು. ಆಗ ಗುರುಶಿಷ್ಯರು ಒಂದು ದಿನ ಜ್ಞಾನ ಚರ್ಚೆಗೆ ಕುಳಿತರು. ಕಾತ್ಯಾಯನನು ಗುರುಗಳಿಗೆ ಮೊದಲನೆಯ ಪ್ರಶ್ನೆಯನ್ನು ಕೇಳಿದನು. 'ಈ ವಿಶ್ವದಲ್ಲಿಯ ವಿವಿಧ ಪದಾರ್ಥಗಳೂ ಈ ಪ್ರಜೆಗಳೂ ಎಲ್ಲಿಂದ ಮತ್ತು ಹೇಗೆ ಹುಟ್ಟುವವು?' ಎಂಬುದೆ ಆ ಪ್ರಶ್ನೆ.

ಅದಕ್ಕೆ ಮುನಿಯು ಅಂದದ್ದು, 'ಪ್ರಿಯಶಿಷ್ಯರೇ, ಸೃಷ್ಟಿಗೆ ಮೂಲನಾದವನು ಪ್ರಜಾಪತಿಯೆನಿಸುವನು, ಯಾಕೆಂದರೆ ಅವನು ಪ್ರಜೆಗಳ ಪತಿಯು. ಪ್ರಜೆಗಳನ್ನು ಹುಟ್ಟಿಸಬೇಕೆಂದು ಇಚ್ಛಿಸಿ ಪ್ರಜಾಪತಿಯು ತಪಸ್ಸು ಮಾಡಿದನು. ಅರ್ಥಾತ್ ಬಲವತ್ತರ ಸಂಕಲ್ಪಮಾಡಿ ಧ್ಯಾನಮಾಡಿದನು. ಇದೇ ಪ್ರಜಾ-ಪತಿಯ ತಪಸ್ಸು. ಆ ತಪಃಪ್ರಭಾವದಿಂದ ಜಡ ಮತ್ತು ಚೈತನ್ಯ ಹೀಗೆ ಎರಡು ತತ್ತ್ವಗಳು ಉತ್ಪನ್ನವಾದವು. ಪ್ರಜಾಪತಿಯು ಸರ್ವಸಮರ್ಥನೂ ಸತ್ಯಸಂಕಲ್ಪನೂ ಇರುವದರಿಂದ ಕೇವಲ ಸಂಕಲ್ಪಮಾತ್ರದಿಂದ ಅವನು ಈ ಎರಡು ತತ್ತ್ವಗಳನ್ನುತ್ಪನ್ನಮಾಡಲು ಸಮರ್ಥನಾದನು. ಅವುಗಳಿಗೆ ಅನ್ನ ಮತ್ತು ಪ್ರಾಣ ಎಂಬ ಹೆಸರು ಇರುವವು. ಈ ಎರಡರ ಸಂಯೋಗದಿಂದಲೆ ಈ ವಿಶ್ವದಲ್ಲಿಯ ಎಲ್ಲ ವಸ್ತುಗಳು ನಿರ್ಮಾಣವಾಗಿರುವವು. ಪ್ರತಿಯೊಂದು ಸೃಷ್ಟ ಪದಾರ್ಥದಲ್ಲಿ ಜಡ ಮತ್ತು ಚೈತನ್ಯ ಇವು ಇರುವವು. ಜಡದ ಮೂಲಕ ನಾಮರೂಪ ಮತ್ತು ಚೈತನ್ಯದ ಮೂಲಕ ಚಲನ ಇವು ಪದಾರ್ಥ

ಗಳಿಗೆ ಉಂಟಾಗುವವು. ಎಲ್ಲೆಲ್ಲಿ ನೋಡಿದರೂ ಈ ಎರಡು ತತ್ವಗಳ ಸಂಯೋಗವು ವಿಶ್ವದಲ್ಲಿ ಕಂಡುಬರುವದು.'

ವೈದರ್ಭಿಯು ಎರಡನೆಯ ಪ್ರಶ್ನೆಯನ್ನು ಕೇಳಿದನು. 'ಈ ಪ್ರಜೆಗಳಿಗೆ ಯಾವ ಶಕ್ತಿಗಳು ಆಧಾರವಾಗಿರುವವು, ಯಾವ ಶಕ್ತಿಗಳ ಮೂಲಕ ಪ್ರಜೆಗಳಿಗೆ ಜ್ಞಾನವಾಗುವದು ಮತ್ತು ಈ ಶಕ್ತಿಗಳಲ್ಲಿ ಎಲ್ಲಕ್ಕೂ ಶ್ರೇಷ್ಠ ವಾವುದು ?' ಪಿಪ್ಪಲಾದನು ಸಮಾಧಾನದಿಂದ ಈ ಪ್ರಶ್ನೆಗೆ ಇತ್ತ ಉತ್ತರವೇನಂದರೆ, 'ಹೇ ವೈದರ್ಭಿಯೇ, ಪೃಥ್ವಿ, ಅಪ್ಪು, ಅಗ್ನಿ, ವಾಯು, ಆಕಾಶ, ಈ ಐದು ಶಕ್ತಿಗಳೆ ಸೃಷ್ಟಿಗೆ ಮತ್ತು ಪ್ರಜೆಗಳಿಗೆ ಆಧಾರ. ವಾಕ್ಕು, ತ್ವಕ್ಕು, ಕಣ್ಣು, ಕಿವಿ ಮತ್ತು ಮನಸು ಇವುಗಳ ಮುಖಾಂತರ ಮನುಷ್ಯನಿಗೆ ಜ್ಞಾನವಾಗುವದು. ಈ ಶಕ್ತಿಗಳಿಗೆ ಪ್ರಾಣವೇ ಚೈತನ್ಯವನ್ನು ಕೊಡುವದು. ಅದೇ ಹೆಚ್ಚಿನದು, ಶ್ರೇಷ್ಠವಾದುದು, ಪ್ರಾಣವಲ್ಲಿಯೆ ಎಲ್ಲವೂ ಪ್ರತಿಷ್ಠಿತವು. ಪ್ರಾಣವು ಶರೀರ ಬಿಟ್ಟು ಹೊರಟಿತೆಂದರೆ ಇನ್ನಾವ ಶಕ್ತಿಗಳೂ ಅಲ್ಲಿರಲಾರವು. ಮಧುಕರ ರಾಣಿಯು ಅಂದರೆ ಜೇನುಹುಟ್ಟಿನ ತಾಯಿಯು ಹುಟ್ಟು ಬಿಟ್ಟು ಹೊರಟೊಡನೆ ಮಿಕ್ಕ ಜೇನುಹುಳಗಳು ಅದನ್ನು ಹಿಂಬಾಲಿಸುವಂತೆ ಪ್ರಾಣವನ್ನು ಮಿಕ್ಕ ಶಕ್ತಿಗಳು ಹಿಂಬಾಲಿಸುವವು. ಪ್ರಾಣದ ಆಧಾರದಿಂದಲೆ, ಅದರ ಸಹಾಯದಿಂದಲೆ ಮಿಕ್ಕ ಶಕ್ತಿಗಳು ತಮ್ಮ ತಮ್ಮ ಕಾರ್ಯವನ್ನು ಮಾಡಿ ಶರೀರಧಾರಣೆ ಮಾಡುವವು. ಈ ಮೂರುಲೋಕದಲ್ಲಿರುವದೆಲ್ಲ ಪ್ರಾಣವನ್ನೆ ಆಶ್ರಯಿಸಿ ಜೀವಿಸುವದು.'

ಅದನ್ನು ಕೇಳಿದ ಬಳಿಕ ಅಶ್ವಲಾಯನನು ಮೂರನೆಯ ಪ್ರಶ್ನೆಯನ್ನು ಕೇಳಿದನು. 'ಗುರುಗಳೇ, ನೀವು ಈ ಪ್ರಾಣವೆಂದು ಹೇಳುವ ಶಕ್ತಿಯು ಎಲ್ಲಿಂದ ಹುಟ್ಟಿತು, ಅದು ಈ ಶರೀರವನ್ನು ಹೇಗೆ ಸೇರಿತು, ತನ್ನನ್ನು ಯಾವ ರೀತಿಯಿಂದ ವಿಭಾಗಿಸಿಕೊಂಡು ಈ ಶರೀರದಲ್ಲಿ ವಾಸಿಸುವದು, ಅದು ಯಾವ ಮಾರ್ಗದಿಂದ ಹೊರಗೆ ಹೋಗುವದು, ಈ ಬಾಹ್ಯಸೃಷ್ಟಿಯನ್ನು ಅದು ಯಾವ ರೀತಿ ಧರಿಸುವದು, ಈ ಶರೀರಕ್ಕೆ ಯಾವ ಪ್ರಕಾರದಿಂದ ಅದು ಆಧಾರವಾಗಿರುವದು ?' ಎಂದು ಅಶ್ವಲಾಯನನು ಒಂದು ಪ್ರಶ್ನಮಾಲಿಕೆಯನ್ನೆ ಮುಂದಿಟ್ಟನು.

ಆಗ ಮುನಿಗಳು ನಸುನಗುತ್ತ ಶಿಷ್ಯರ ಜಿಜ್ಞಾಸೆಯನ್ನು ಪೂರ್ಣವಾಗಿ ತಣಿಸುವ ಬುದ್ಧಿಯಿಂದ ಅಂದದ್ದು, 'ಅಶ್ವಲಾಯನನೇ, ವೈದರ್ಭಿಯು ಕೇಳಿದ

ಪ್ರಶ್ನೆಯ ಮುಂದಿನ ಪ್ರಶ್ನೆಯನ್ನು ನೀನು ಕೇಳಿರುವೆ. ಈ ಪ್ರಾಣಶಕ್ತಿಯು ಆತ್ಮನಿಂದಲೆ ಹುಟ್ಟಿರುವದು. ಮತ್ತಿನ್ನೆಲ್ಲಿಂದ ಅದು ಹುಟ್ಟಬಲ್ಲದು? ಆತ್ಮವೆಂಬ ಅವ್ಯಕ್ತವೆ ಎಲ್ಲ ವಸ್ತುಗಳ ಮೂಲವು. ಅದರಾಚೆಗೆ ಏನೂ ಇಲ್ಲ ವೆಂದೆ ಹೇಳಬೇಕಾಗಿದೆ. ಯಾಕಂದರೆ ಮಾನವಬುದ್ಧಿಯು ಅದರಾಚೆಗೆ ಹರಿಯುವದೆ ಇಲ್ಲ. ಮನುಷ್ಯನೊಡನೆ ಅವನ ನೆಳಲು ಇರುವಂತೆ ಶರೀರದಲ್ಲಿ ಈ ಪ್ರಾಣವು ನಖಶಿಖಾಂತವಾಗಿ ವ್ಯಾಪ್ತವು. ಚಿತ್ತದ ದ್ವಾರದಿಂದ ಅದು ಈ ಶರೀರದಲ್ಲಿ ಸೇರುವದು, ಅರಸನು ತನ್ನ ಆಳುಗಳಿಗೆ ಅವರವರ ಅಧಿಕಾರ ಗಳನ್ನು ನೇಮಿಸಿಕೊಡುವಂತೆ ಪ್ರಾಣರಾಜನು ಸ್ವತಃ ಮೂಗಿನ ಹೊಳ್ಳೆಗಳಲ್ಲಿ ವಾಸಮಾಡುತ್ತ ಅಪಾನ, ವ್ಯಾನ, ಉದಾನ, ಸಮಾನ ಎಂಬ ತನ್ನಂಶಗಳನ್ನು ಶರೀರದ ಬೇರೆ ಬೇರೆ ಭಾಗಗಳಲ್ಲಿ ನೇಮಿಸಿರುವನು. ಮರಣಸಮಯದಲ್ಲಿ ಈ ಪ್ರಾಣವು ಉದಾನಮಾರ್ಗದಿಂದ ಹೊರಗೆ ಹೋಗುವದು. ಪ್ರಾಣಶಕ್ತಿಯು ಆದಿತ್ಯನ ಮುಖಾಂತರ ಈ ಬಾಹ್ಯಸೃಷ್ಟಿಯನ್ನು ಧಾರಣಮಾಡಿರುವದು. ಮತ್ತು ಚಿತ್ತದಲ್ಲಿ ಸ್ಥಿರವಾಗಿದ್ದು ಈ ಶರೀರವನ್ನು ಧಾರಣ ಮಾಡಿರುವದು. ಇದಕ್ಕೆ ಪ್ರಾಣವಿದ್ಯೆಯೆನ್ನುವರು. ಇದನ್ನರಿತವರು ಪ್ರಾಣವನ್ನು ವಶದಲ್ಲಿಟ್ಟು ಕೊಳ್ಳಬಲ್ಲರು. ಪ್ರಾಣಾಯಾಮಾದಿ ಸಾಧನಗಳಿಂದ ಹಾಗೆ ಮಾಡುವದು ಸಾಧ್ಯವು.'

ಈ ಪ್ರಾಣವಿದ್ಯೆಯನ್ನು ಕೇಳಿದ ಬಳಿಕ ಸಹ ಆ ಶಿಷ್ಯರಿಗೆ ಇನ್ನೂ ಸಂಶಯಗಳುಳಿದಿದ್ದವು. ಆಗ ಗಾರ್ಗ್ಯನೆಂಬವನು, 'ಈ ಶರೀರದಲ್ಲಿ ಮಲಗು ವವರಾರು, ಕನಸನ್ನು ಕಾಣುವವರಾರು, ಸುಖವೆಂಬುವು ಅಥವಾ ದುಃಖ ವೆಂಬುದು ಯಾರಿಗೆ ಆಗುವದು, ಶಕ್ತಿಗಳೆಲ್ಲ ಯಾರಲ್ಲಿ ಪ್ರತಿಷ್ಠಿತವಾಗಿರು ವವು?' ಈ ಮುಂತಾದ ಪ್ರಶ್ನೆಗಳನ್ನು ಕೇಳಿದನು. ಪಿಪ್ಪಲಾದ ಮುನಿಯು ಈ ಪ್ರಶ್ನೆಗಳಿಗೆ ಒಳ್ಳೆ ಆನಂದದಿಂದ ಸಮರ್ಪಕ ಉತ್ತರಗಳನ್ನು ಕೊಟ್ಟನು.

ಅವನು ಅಂದದ್ದು, 'ಶಿಷ್ಯವರರೇ, ಸಾಯಂಕಾಲದಲ್ಲಿ ಸೂರ್ಯನ ಕಿರಣ ಗಳೆಲ್ಲ ಅವನಲ್ಲಿಯೇ ಒಂದಾಗುವಂತೆ ಮಲಗುವಾಗ ಪುರುಷನ ಶಕ್ತಿಸರ್ವಸ್ವ ಗಳೆಲ್ಲ ಅವನ ಮನಸಿನಲ್ಲಿಯೇ ಒಂದಾಗುವವು. ಆಗ ಪ್ರಾಣವು ಮಾತ್ರ ಎಚ್ಚರಿದ್ದು ಪಚನ, ರುಧಿರಾಭಿಸರಣ, ಮುಂತಾದ ಶರೀರಧಾರಣದ ಅವಶ್ಯ ಕ್ರಿಯೆಗಳನ್ನು ಮಾಡುತ್ತಲೆ ಇರುವದು. ಆಗ ಮನಸು ಸ್ಥೂಲ ಸೃಷ್ಟಿಯಿಂದ ನಿವೃತ್ತವಾಗಿದ್ದರೂ ಸೂಕ್ಷ್ಮರೂಪದಿಂದ ಕನಸನ್ನು ಕಾಣುವದು, ಎಲ್ಲ

ಅನುಭವಗಳನ್ನು ಸೂಕ್ಷ್ಮಭಾವದಿಂದ ಅನುಭವಿಸುವದು. ಮನಸು ಅದರಾಚೆಗೆ ಹೋಯಿತೆಂದರೆ ವಿಶ್ರಾಂತಿಪಡೆದು ನಿದ್ರಾಸುಖವನ್ನನುಭವಿಸುವದು. ಆಗ ಪ್ರಾಣವೊಂದನ್ನುಳಿದು ಮನಸು ಮೊದಲಾದ ಎಲ್ಲ ಶಕ್ತಿಗಳು ಆತ್ಮನಲ್ಲಿ ಪ್ರತಿಷ್ಠಿತವಿರುವವು. ಆತ್ಮನೆ ಪರಾಯಣನು, ಪರಮ ಆಯತನನು, ಎಲ್ಲರ ಆಚೆಗಿನವನು.'

ಆತ್ಮನೇ ಎಲ್ಲಕ್ಕೂ ಶ್ರೇಷ್ಠನು ಮತ್ತು ಎಲ್ಲಕ್ಕೂ ಆಚೆಗಿನವನು, ಎಂಬುದನ್ನು ಕೇಳಿದ ಬಳಿಕ ಸತ್ಯಕಾಮನು ಅಂದದ್ದು, 'ಗುರುಗಳೇ, ಆಜನ್ಮ ಓಂಕಾರೋಪಾಸನೆ ಮಾಡುವವನಿಗೆ ಯಾವ ಫಲವು ದೊರೆಯುವದು?' ಈ ಪ್ರಶ್ನೆಯು ಸಾಧನೆಯನ್ನು ಕುರಿತು ಇತ್ತು.

ಪಿಪ್ಪಲಾದನು ಅಂದದ್ದು, 'ನೀನು ಈಗ ಒಂದು ಜ್ಞಾನಸಾಧನೆಯ ವಿಷಯಕ್ಕೆ ಪ್ರಶ್ನೆ ಮಾಡಿರುವಿ. ಓಂ ಎಂಬುದು ಅತ್ಯಂತ ಮಹತ್ವದ ಮಂತ್ರವು. ಬ್ರಹ್ಮನು ಪರ ಮತ್ತು ಅಪರ, ಎಂದು ಎರಡು ವಿಧನು. ಚರಾಚರ ಸೃಷ್ಟಿಯಲ್ಲಿ ವ್ಯಕ್ತನಾದವನು ಅಪರ ಬ್ರಹ್ಮನು, ಇದರಾಚೆಗೆ ಅನಂತನೂ ಅಸೀಮನೂ ಆಗಿ ಇರುವವನೆ ಪರಬ್ರಹ್ಮನು. ಆ ಪರಾಪರ ಬ್ರಹ್ಮಕ್ಕೆ ಓಂ ಎಂಬ ನಿರ್ದೇಶವಿರುವದು. ಇನ್ನು ಮಂತ್ರವೆಂದರೇನು ಇದನ್ನು ತಿಳಿಯುವಂಥವರಾಗಿರಿ. ಗೂಢಾರ್ಥವನ್ನು ಸಂಕ್ಷೇಪದಿಂದ ನಿದರ್ಶಿಸುವ ಅಕ್ಷರ ಅಥವಾ ಅಕ್ಷರಸಮೂಹವೆ ಮಂತ್ರವೆನಿಸುವದು. ಮೂರ್ತಿಗಳು ಹೇಗೆ ದೇವತೆಗಳ ಲೋಹಮಯ ಪ್ರತೀಕಗಳೊ ಹಾಗೆ ಓಂಕಾರವು ಪರಬ್ರಹ್ಮನ ಧ್ವನಿಮಯ ಪ್ರತೀಕವು. ಓಂಕಾರದಲ್ಲಿ ಅ, ಉ, ಮ್ ಎಂಬ ಮೂರು ಮಾತ್ರೆಗಳಿರುವವು. ಆ ಮೂರು ಮಾತ್ರೆಗಳು ಕ್ರಮವಾಗಿ ಋಕ್, ಯಜುಸ್, ಸಾಮವೇದಗಳ ಪ್ರತೀಕಗಳು. ಓಂಕಾರದ ಕೇವಲ ಏಕಮಾತ್ರೆಯ ಉಪಾಸನೆಯಿಂದ ಅಂದರೆ ಕೇವಲ ಋಗ್ವೇದದ ಉಪಾಸನೆಯಿಂದ ಮನುಷ್ಯನು ಯಶ ಐಶ್ವರ್ಯಾದಿಗಳನ್ನು ಪಡೆದು ಈ ಲೋಕದಲ್ಲಿ ಮಹಿಮೆಯನ್ನನುಭವಿಸುವನು. ಓಂಕಾರದ ದ್ವಿಮಾತ್ರೆಯ ಉಪಾಸನೆಯಿಂದ ಅಂದರೆ ಯಜುರ್ವೇದದ ಉಪಾಸನೆಯಿಂದ ಸ್ವರ್ಗಲೋಕವು ಅರ್ಥಾತ್ ಸುಖೋಪಭೋಗಗಳುಳ್ಳ ಲೋಕವು ಪ್ರಾಪ್ತವಾಗುವದು. ಓಂಕಾರದ ತ್ರಿಮಾತ್ರೆಯ ಧ್ಯಾನದಿಂದ ಅಂದರೆ ಸಾಮೋಪಾಸನೆಯಿಂದ ಉಪಾಸಕನು ಪರೆಯುಚ್ಚಿದ ಹಾವಿನಂತೆ ಪಾಪಮುಕ್ತನಾಗಿ ಬ್ರಹ್ಮಲೋಕವನ್ನೈದುವನು. ಇದರ ರಹಸ್ಯವೇನಂದರೆ, ಋಗ್ವೇದದಲ್ಲಿ ದೇವದೇವತೆಗಳ

ಸ್ತುತಿ ಸ್ತೋತ್ರಗಳೆ ವಿಶೇಷವಿದ್ದು ಸಮೃದ್ಧಿ, ಯಶಕೀರ್ತಿಗಳ ಸಾಧನವೆ ಅಲ್ಲಿ ಮುಖ್ಯವಾಗಿರುವದು. ಯಜುರ್ವೇದವು ಯಜ್ಞಯಾಗಾದಿ ಸಕಾಮ ಪುಣ್ಯ ಕರ್ಮಗಳನ್ನು ಹೇಳುವುದರಿಂದ ನಶ್ವರವಾದ ಸ್ವರ್ಗವೆ ಅವುಗಳ ಫಲವು. ನಿಷ್ಕಾಮ ಈಶ್ವರೋಪಾಸನೆಯಿಂದಲೆ ಮುಕ್ತಿಯು ದೊರೆಯಬಲ್ಲದು. ಅದರ ಆರಂಭವು ಸಾಮವೇದದಲ್ಲಿ ದೊರೆಯುವದು. ಆ ಶಾಂತ, ಅಜರ, ಅಸುರ ಸ್ಥಾನವು ದೊರಕಬೇಕಾದರೆ ಈ ಓಂಕಾರೋಪಾಸನೆಯನ್ನು ನಿಷ್ಕಾಮತೆಯಿಂದ ಮಾಡುವದೆ ಉಪಾಯವು.'

ಕೊನೆಗೆ ಭಾರದ್ವಾಜನು ಕಟ್ಟಕಡೆಯ ಪ್ರಶ್ನೆಯನ್ನು ಕೇಳಿದನು. 'ಗುರುವರ್ಯರೇ, ನೀವು ಇದುವರೆಗೆ ಸಮರ್ಪಕ ಉತ್ತರಗಳನ್ನು ಕೊಟ್ಟು ನಮ್ಮನ್ನು ತೃಪ್ತಗೊಳಿಸಿರುವಿರಿ. ಇನ್ನು ನಾನೂ ಒಂದು ಪ್ರಶ್ನೆಯನ್ನು ಕೇಳುವೆನು. ಒಮ್ಮೆ ರಾಜಕುಮಾರನಾದ ಹಿರಣ್ಯನಾಭನು ನನ್ನ ಬಳಿಗೆ ಬಂದು, ಷೋಡಶ ಕಲೆಗಳುಳ್ಳ ಪುರುಷನು ಯಾರು, ಎಂದು ಕೇಳಿದನು. ಅದಕ್ಕೆ ನಾನು ಉತ್ತರವನ್ನು ಕೊಡಲಾರದೆ ಹೋದೆನು. ನನಗೆ ಉತ್ತರವು ಗೊತ್ತಿದ್ದರೆ ನಾನು ಅವನಿಗೆ ಹೇಳದೆ ಇರುತಿರಲಿಲ್ಲ. ನಾನು ಈಗ ತಮಗೆ ಆ ಪ್ರಶ್ನೆಯನ್ನೆ ಕೇಳಲಿಚ್ಛಿಸುವೆನು' ಎಂದು ನಮ್ರನಾಗಿ ನುಡಿದನು. ಗುರುಗಳು ಶಿಷ್ಯರ ವಿನೀತಭಾವವನ್ನೂ ಜ್ಞಾನದ ಬಗ್ಗೆ ಇದ್ದ ಅವರ ಉತ್ಕಟ ಇಚ್ಛೆಯನ್ನೂ ನೋಡಿ ಅಂದದ್ದು, 'ನನ್ನ ಅತ್ಯಂತ ಪ್ರೀತಿಯ ಶಿಷ್ಯರೇ, ಆ ಷೋಡಶ ಕಲೆಗಳುಳ್ಳ ಪುರುಷನೆಂಬುವವನು ಇದೇ ಈ ಶರೀರದಲ್ಲಿ ವಾಸ ಮಾಡುತಿರುವನು. ಕಲೆಗಳೆಂದರೆ ಅಂಶ ಅಥವಾ ಭಾಗ. ಅವನಿಂದಲೆ ಪ್ರಾಣ, ಪ್ರಾಣದಿಂದ ಶ್ರದ್ಧೆ, ಆಕಾಶ, ವಾಯು, ಅಪ್ಪು, ತೇಜ, ಪೃಥಿವಿ, ಇಂದ್ರಿಯ, ಮನಸು, ಅನ್ನ, ಅನ್ನದಿಂದ ವೀರ್ಯ, ತಪಸ್ಸು, ಮಂತ್ರಗಳು, ಕರ್ಮ, ಲೋಕಗಳು, ಲೋಕಗಳಲ್ಲಿ ನಾಮರೂಪಾತ್ಮಕ ವಸ್ತುಗಳು, ಹೀಗೆ ಉತ್ಪನ್ನವಾಗಿರುವವು. ಶರೀರದಲ್ಲಿ ಪ್ರಾಣವಿರುವವರೆಗೆ ಅವನು ಇರುವನು. ಪ್ರಾಣವು ಜಾರಿದೊಡನೆ ಅವನೂ ಹೊರಟುಹೋಗುವನು. ದಿಕ್ಕುದಿಕ್ಕುಗಳಲ್ಲಿ ಹರಿಯುವ ನದಿಗಳು ಸಮುದ್ರವನ್ನು ಕುರಿತು ಸಾಗಿ ಅದರಲ್ಲಿ ಲೀನವಾಗಿ ತಮ್ಮ ವಿವಿಧ ನಾಮರೂಪಗಳನ್ನು ಕಳಕೊಳ್ಳುವಂತೆ ಮರಣಸಮಯದಲ್ಲಿ ಈ ಹದಿನಾರು ಕಲೆಗಳೆಲ್ಲ ಆ ಪುರುಷನಲ್ಲಿ ಲೀನವಾಗಿ ತಮ್ಮ ಬೇರೆತನವನ್ನು ಕಳಕೊಳ್ಳುವವು. ಆಗ ಪುರುಷನು ಅಕಲನೂ ಅಮೃತನೂ ಎನಿಸುವನು. ಆ

ಪುರುಷನೆ ಪರವಸ್ತು. ಅದರಾಚೆಗೇನೂ ಇಲ್ಲ. ಆ ಅಕಲಪುರುಷನ ಯಥಾರ್ಥ ಜ್ಞಾನವೆ ಆತ್ಮಜ್ಞಾನ ಅಥವಾ ಬ್ರಹ್ಮಜ್ಞಾನವೆನಿಸುವದು. ಅದನ್ನು ಪಡೆದು ಸಾಕ್ಷಾತ್ಕರಿಸಿರಿ. ಅಂದರೆ ನೀವು ಧನ್ಯರಾಗುವಿರಿ, ಕೃತಾರ್ಥರಾಗುವಿರಿ. ನಿತ್ಯ ಸುಖದ ಸಮ್ರಾಟರಾಗುವಿರಿ. ನಿಮ್ಮ ಮನಸು ಶುದ್ಧವಾಗಿ ನಿಮ್ಮ ಬುದ್ಧಿಯು ತೇಜಸ್ವಿಯಾಗಿ ನಿಮ್ಮ ಕರ್ಮವು ವೀರ್ಯವತ್ತರವಾಗುವದು. ನಾನು ನಿಮ್ಮೆಲ್ಲರನ್ನು ಆಶೀರ್ವದಿಸುವೆನು. '

ಗುರುಗಳುಸುರಿದ ಜ್ಞಾನವನ್ನೂ ಅವರ ಆಶೀರ್ವಚನವನ್ನೂ ಕೇಳಿ ಆ ಆರೂ ಕುಮಾರರು ಛಿನ್ನಸಂಶಯರೂ ಸಂತುಷ್ಟರೂ ಆದರು. ಗುರುಗಳಿಗೆ ಪೊಡಮಟ್ಟು ಹೊಸ ಹುರುಪಿನಿಂದ ಸತ್ಯಜ್ಞಾನದ ಸಾಕ್ಷಾತ್ಕಾರಸಾಧನೆಗಾಗಿ ಅವರು ಮುಂದುವರಿದರು.

## ೧೪. ಸ್ನಾತಕರಿಗೆ ಉಪದೇಶ

ಹಿಂದಕ್ಕೆ ಒಂದು ರಮ್ಯ ಪ್ರದೇಶದಲ್ಲಿ ಒಂದು ಪ್ರಸಿದ್ಧ ಗುರುಕುಲವಿತ್ತು. ಅಲ್ಲಿ ಅನೇಕ ಶಿಷ್ಯರು ಶಿಕ್ಷಣಪಡೆದು, ತಮ್ಮ ತಮ್ಮ ಸಾಮರ್ಥ್ಯದ ಮೇರೆಗೆ ವಿದ್ಯೆ ಗಳಿಸಿ ತಮ್ಮತಮ್ಮ ಮನೆಗೆ ತೆರಳುತಿದ್ದರು. ಕಾಲಕಾಲಕ್ಕೆ ಅಲ್ಲಿಂದ ವಿದ್ಯಾರ್ಥಿಗಳು ಹೋಗುವ ಪ್ರಸಂಗವು ಬರುತಿತ್ತು. ಅಂಥ ಒಂದು ಪ್ರಸಂಗವು ಒದಗಿದಾಗ ಈ ಕೆಳಗಿನಂತೆ ಗುರುಗಳು ಶಿಷ್ಯರಿಗೆ ಉಪದೇಶವನ್ನು ಮಾಡಿದರು.

ಆ ದಿನ ಆಶ್ರಮದಲ್ಲಿ ತುಂಬ ಗಡಿಬಿಡಿಯು. ಹನ್ನೆರಡು ವರ್ಷ ಗುರು ಗೃಹದಲ್ಲಿ ಬ್ರಹ್ಮಚರ್ಯದಿಂದ ಇದ್ದು ಶ್ರದ್ಧಾಪೂರ್ವಕ ಅಧ್ಯಯನ ಮಾಡಿ ಕುಮಾರರು ತಮ್ಮ ಮನೆಗೆ ಹೊರಡುವ ದಿನವದು. ಪ್ರಾತಃಕಾಲದಲ್ಲಿ ಸ್ನಾನಸಂಧ್ಯಾದಿಗಳನ್ನು ಮುಗಿಸಿಕೊಂಡು ತೇಜಃಪುಂಜ ವಿದ್ಯಾರ್ಥಿಗಳು ತಮ್ಮ ಗುರುಗಳ ಅಪ್ಪಣೆ ಪಡೆಯಲು ಅವರೆದುರಿಗೆ ಬಂದರು. ಆ ರಮ್ಯ ಸ್ಥಲ, ಸಮವಯಸ್ಕರ ಸರಸವಾದ ಸಂಗತಿ, ತಂದೆಯಂತಿರುವ ಪ್ರೇಮಪೂರ್ಣ ಗಂಭೀರ ಗುರುಗಳ ಸಹವಾಸ ಇವುಗಳನ್ನು ಬಿಟ್ಟು ಅಜ್ಞಾತ ಜಗತ್ತಿನಲ್ಲಿ

ಕಾಲಿಡಲು ಒಂದೆಮುಂದೆ ನೋಡುತ್ತಿರುವ ಆ ಕುಮಾರರೆಲ್ಲರೂ ಸಾಷ್ಟಾಂಗ ಪ್ರಣಿಪಾತಮಾಡಿ ಗದ್ಗದ ಕಂಠದಿಂದ, 'ಗುರುದೇವಾ, ಅಪ್ಪಣೆಯಾಗಬೇಕು' ಎಂದು ಒಬ್ಬೊಬ್ಬರೆ ತಮ್ಮ ಸ್ಥಲಕ್ಕೆ ಹೋಗಿ ಕುಳಿತರು. ಅಜ್ಞಾತ ಸಮುದ್ರ ದಲ್ಲಿ ಮೊಟ್ಟಮೊದಲು ನಾವೆಯನ್ನು ನೂಕುವ ನಾವಾಡಿಗನು ಅಥವಾ ಪತಿಗೃಹಕ್ಕೆ ಮೊದಲನೆಯ ಸಾರೆ ಹೋಗಲನುವಾದ ನವ ವಧುವು ಅನುಭವಿ ಸುವ ಸಂಮಿಶ್ರಭಾವಕಲ್ಲೋಲವನ್ನು ಅವರೆಲ್ಲರು ಆ ದಿನ ಅನುಭವಿಸಿದರು.

ಆ ರೀತಿ ಮಿಶ್ರಭಾವನೆಗಳಿಂದ ತುಂಬಿದ ಶಿಷ್ಯವೃಂದವನ್ನನುಲಕ್ಷಿಸಿ ಗುರುಗಳು ಪ್ರೇಮಭರದಿಂದ ಕಣ್ಣೀರು ತುಂಬಿ ಅವರಿಗೆ ಅಂದದ್ದು, 'ನನ್ನ ಹೃದಯಮಣಿಗಳಿರಾ, ನೀವು ಈ ದಿನ ನನ್ನನ್ನು ಬಿಟ್ಟುಹೋಗುವಾಗ ನನಗೆ ಆಗುವ ದುಃಖವನ್ನು ಯಾವ ಪರಿ ವರ್ಣಿಸಲಿ? ತಾಯಿಗೂ ಮಗುವಿಗೂ ಆಗುವ ವಿಯೋಗವಿರಹವು ಇದಕ್ಕೂ ಹೆಚ್ಚು ಕಷ್ಟದಾಯಕವಿರಲಿಕ್ಕಿಲ್ಲ, ಇಷ್ಟೇ ನಾನು ಈ ಬಗ್ಗೆ ಹೇಳಬಲ್ಲೆನು. ಆದರೆ ಈ ಭಾವನೆಗಳನ್ನು ನಾವು ಸಂಯಮಿಸಲಿಕ್ಕೆ ಬೇಕು. ನಮ್ಮ ಧ್ಯೇಯವನ್ನು ನಾವು ಯಾವಾಗಲೂ ನಿಚ್ಚಳವಾಗಿ ಕಣ್ಣಮುಂದಿಟ್ಟುಕೊಂಡು ಅದರಂತೆ ನಡೆಯಲಿಕ್ಕೆ ಬೇಕು. ನೀವು ಇಲ್ಲಿ ನಿರಂತರ ನಿವಾಸಿಗಳಾಗಲಿಕ್ಕೆ ಬಂದವರಲ್ಲ. ಆದರೆ ಇಲ್ಲಿ ವಿದ್ಯೆ ಕಲಿತು ವಿಶ್ವಪ್ರಪಂಚದಲ್ಲಿ ವೀರಚರಿತ್ರರಂತೆ ವರ್ತಿಸುವ ಆಕಾಂಕ್ಷೆಯಿಂದ ಬಂದಿರುವಿರಿ. ಅಂದಬಳಿಕ ಈಗ ಆ ಪ್ರಸಂಗವು ಬಂದಿದೆ. ಮನುಷ್ಯನು ಮಲಗುವದು, ಪುನಃ ಎದ್ದು ಉತ್ಸಾಹದಿಂದ ಕಾರ್ಯಮಾಡಬೇಕೆಂದು, ಮನುಷ್ಯನು ಜ್ಞಾನಪಡೆಯುವದು ತಾನು ಸಮರ್ಥನಾಗಿ ವೀರಚರಿತ ನಾಗಬೇಕೆಂದು; ಹಾಗೆ ಮನುಷ್ಯನು ಕಲಿಯುವದು ಅಥವಾ ಆಶ್ರಮಕ್ಕೆ ಬರು ವದು ಅವನು ಪುನಃ ವಿಶಾಲ ಜಗತ್ತಿನಲ್ಲಿ ತನ್ನ ಕರ್ತವ್ಯವನ್ನು ಉತ್ತಮ ರೀತಿಯಿಂದ ಮಾಡಲೋಸುಗ ಹೋಗುವದಕ್ಕಾಗಿ. ಸಾಧನವು ಎಷ್ಟೇ ಮನೋಹರವಿದ್ದರೂ ಮನುಷ್ಯನು ಸಾಧ್ಯವನ್ನು ಮರೆಯಕೂಡದು. ಇಲ್ಲ ದಿದ್ದರೆ ಬಲು ಚಂದವಾಗಿದೆ ಎಂದು ಬಾರಿಸದೆ ಬರೀ ವೀಣೆಯನ್ನು ನೋಡುತ್ತ ಕುಳಿತ ಮರುಳ ಸಂಗೀತಕಾರನ ಕಥೆಯಂತೆ ನಿಮ್ಮ ಹಾಡಾಗುವದು. ಜ್ಞಾನದ ಪರೀಕ್ಷೆ ಕರ್ಮದಲ್ಲಿ ಹೊರತು ಕಲ್ಪನೆಯಲ್ಲಿ ಅಲ್ಲ, ವಿದ್ಯೆಯ ಪರೀಕ್ಷೆ ಪ್ರಪಂಚ ದಲ್ಲಿ ಹೊರತು ವಿದ್ಯಾಲಯದಲ್ಲಿ ಅಲ್ಲ.

'ನೀವು ಈಗ ನಿಮ್ಮ ಅಧ್ಯಯನವನ್ನು ಮುಗಿಸಿರುವಿರಿ, ವಿದ್ಯಾವಂತರೂ

ಬಲವಂತರೂ ಆಗಿರುವಿರಿ. ಈ ಶಾಂತ ವಾತಾವರಣದಲ್ಲಿ ನೀವು ಅಳವಡಿಸಿ ಧೃಡಪಡಿಸಿದ ವಿದ್ಯೆಯನ್ನೂ ಗುಣಗಳನ್ನೂ ಜಗತ್ತಿನಲ್ಲಿ ನೀವು ಮಾಡುವ ವ್ಯವಹಾರಗಳಲ್ಲಿ ಸ್ಥಿರಮನಸ್ಸಿನಿಂದ ಉಪಯೋಗಿಸಿ ಧನ್ಯರಾಗಿರಿ. ಆದ ರಿಂದಲೆ ನೀವು ಧನ್ಯರಾಗುವಿರಿ, ಅದರಿಂದಲೇ ಕೃತಾರ್ಥರಾಗುವಿರಿ, ಸಮಾಜ ವನ್ನು ಧನ್ಯಗೊಳಿಸುವಿರಿ. ಸತ್ಯವನ್ನು ನುಡಿಯಿರಿ. ಧರ್ಮದಿಂದ ನಡೆ ಯಿರಿ. ನಡೆನುಡಿಗಳನ್ನು ಯಾವಾಗಲೂ ಮೇಳೆಯಿಸಿರಿ. ಸ್ವಾಧ್ಯಾಯ ವನ್ನು ಎಂದೂ ತಪ್ಪಿಸಬೇಡಿರಿ. ಗುರು ಹಿರಿಯರಿಗೆ ಸಲ್ಲಿಸತಕ್ಕ ಸತ್ಕಾರಾದಿ ಗಳನ್ನು ಯಾವಾಗಲೂ ಸಲ್ಲಿಸುತ್ತ ಇರ್ರಿ. ಗೃಹಸ್ಥಾಶ್ರಮಿಗಳಾಗಿ ವಂಶ ವನ್ನು ಮುಂದೆ ವೃದ್ಧಿಗೊಳಿಸಿರಿ. ಸತ್ಯದಿಂದ ಎಂದೆಂದಿಗೂ ಚ್ಯುತರಾಗ ಬೇಡಿರಿ. ಧರ್ಮಬಾಹಿರರಾಗಬೇಡಿರಿ. ಕಲ್ಯಾಣದಿಂದ ದೂರಾಗಬೇಡಿರಿ. ನಿಮ್ಮ ಹಿತವನ್ನು ಸಾಧಿಸುವದರಲ್ಲಿ ದಕ್ಷರಾಗಿರಿ. ಸ್ವಾಧ್ಯಾಯ ಮಾಡುವ ದರಲ್ಲಿ, ವ್ಯಾಖ್ಯಾನ ಹೇಳುವದರಲ್ಲಿ ತಪ್ಪಬೇಡಿರಿ. ದೇವಕಾರ್ಯ–ಪಿತೃ ಕಾರ್ಯಗಳನ್ನು ತಪ್ಪಿಸಬೇಡಿರಿ. ತಂದೆತಾಯಿಗಳು, ಗುರುಹಿರಿಯರು, ಅತಿಥಿ ಅಭ್ಯಾಗತರು ಇವರು ದೇವತೆಗಳೆಂದು ಮನ್ನಿಸಿರಿ. ಯಾವಾಗಲೂ ನಿರ್ದೋಷವಾದ ಕಾರ್ಯಗಳನ್ನೇ ಮಾಡಿರಿ. ಮಿಕ್ಕವುಗಳಿಂದ ಯಾವಾಗಲೂ ಏಳು ಗಾವುದ ದೂರ ಇರುವಂಥವರಾಗಿರಿ. ಗುರುಹಿರಿಯರನ್ನು ಓಂಬಾಲಿ ಸಿರಿ, ಅರ್ಥಾತ್ ನಾವು ಮಾಡುತಿರುವ ಸತ್ಕಾರ್ಯಗಳನ್ನಷ್ಟೆ ನೀವು ಅನುಸರಿಸಿರಿ, ಮಿಕ್ಕವುಗಳನ್ನು ತ್ಯಜಿಸಿರಿ. ನಿಮಗಿಂತ ಶ್ರೇಷ್ಠರಿದ್ದವರನ್ನು ನೀವು ಆಸನಾದಿಗಳನ್ನು ಕೊಟ್ಟು ಸತ್ಕರಿಸತಕ್ಕದ್ದು. ಕೊಡಗೈ ದೊರೆಯಂತೆ ನೀವು ದಾನಮಾಡತಕ್ಕದ್ದು. ಶ್ರದ್ಧೆಯಿಂದ ಕೊಡಬೇಕು, ವಿನಯದಿಂದ ಕೊಡಬೇಕು, ಸಾಕಷ್ಟು ಕೊಡಬೇಕು. ಯಾವ ಕರ್ಮವನ್ನು ಮಾಡ ಬೇಕು, ಯಾವುದನ್ನು ಬಿಡಬೇಕು, ಜೀವನಕ್ರಮವು ಹೇಗೆ ಇರಬೇಕು, ಎಂಬ ಮುಂತಾದ ಪ್ರಶ್ನೆಗಳ ಬಗ್ಗೆ ಸಂದೇಹವುಂಟಾದಾಗ ಒಳ್ಳೆ ವಿಚಾರವಂತರೂ ಸದಾಚಾರಿಗಳೂ ಆದ ಬ್ರಹ್ಮಜ್ಞಾನಿಗಳು ಆಯಾ ಸಂದರ್ಭಗಳಲ್ಲಿ ಯಾವ ರೀತಿ ವರ್ತಿಸುವರೋ ಆ ರೀತಿ ನೀವೂ ವರ್ತಿಸಬೇಕು. ಈ ಮಹತ್ವದ ಪ್ರಸಂಗದಲ್ಲಿ, ಆಶ್ರಮವಾಸವನ್ನು ಮುಗಿಸಿ ನೀವು ಸಂಸಾರೋನ್ಮುಖರಾದ ಈ ಸಂಧಿಯಲ್ಲಿ, ನಾನು ಹೇಳುವ ಉಪದೇಶವು ಇಷ್ಟೇ ಇರುವದು. ಸದೈವ ಬೆಳಗುವ ಜ್ಯೋತಿಯಂತೆ ಇದನ್ನು ನೀವು ನೆನಪಿನಲ್ಲಿಟ್ಟುಕೊಂಡು ನಡೆದರೆ

ನಿಮಗೆ ಯಾವ ಸಂಕಟವೂ ಪ್ರಾಪ್ತವಾಗಲಿಕ್ಕಿಲ್ಲ, ನಿಮ್ಮ ಅಂತಃಕರಣವು ಯಾವಾಗಲೂ ಅಚ್ಚಳಿಯದೆ ಉಳಿದು ನಿಮ್ಮಿಂದ ಯಾವಾಗಲೂ ಯೋಗ್ಯ, ಪರೋಪಕಾರಿ ಮತ್ತು ವೀರೋಚಿತ ಶ್ರೇಷ್ಠಕರ್ಮಗಳೆ ಆಗುವವು. ನಿಮ್ಮ ಧೃತಿ ಉತ್ಸಾಹಗಳು ಅಳಿಯದೆ, ಇಳಿಯದೆ ಉಳಿಯುವವು. ನಿಮ್ಮ ಆನಂದವು ಅಬಾಧವೂ ನಿಸರ್ಗನಿರ್ಝರದಂತೆ ನಿರ್ಮಲವೂ ನಿರಂತರವೂ ಇರುವದು. ನನ್ನ ಪ್ರಿಯ ಆತ್ಮಗಳೇ, ಇನ್ನು ಹೋಗಿ ಬನ್ನಿರಿ. ನಾನು ನಿಮಗೆ ಅಭಯವನ್ನೂ ಆಯುರಾರೋಗ್ಯಗಳನ್ನೂ ಆಶೀರ್ವದಿಸುವೆನು. ಹೋಗಿ ಬನ್ನಿ.'

ಈ ಪ್ರೇಮಪೂರ್ಣ ಕಳಕಳದ ಸಂದೇಶವನ್ನು ಕೇಳಿ ಶಿಷ್ಯರ ಅರಳಿದ ಅಂತಃಕರಣಗಳಲ್ಲಿ "ಸತ್ಯಧರ್ಮದ ಮತ್ತು ವೀರ ಕರ್ಮದ ಆಜ್ಯೋತಿ ದಂತಾಯಿತು. ತೆರೆಮನದಿಂದ ಕೇಳಿದ ಆ ಉಪದೇಶವನ್ನು ಅವರು ಹೃದಯದಲ್ಲಿ ಕೊರೆದಿಟ್ಟರು. ಆಚಾರ್ಯರು ಅನುಗ್ರಹಿಸಿದ ಅಭೇದ್ಯವಾದ ವಚನಕವಚವನ್ನು ಹಾಕಿಕೊಂಡು ಜೀವನಯುದ್ಧದ ರಣರಂಗದಲ್ಲಿ ಕಾದಲು ಅವರು ಆಶ್ರಮದಿಂದ ಹೊರಹೊರಟರು. ಮೊದಲಿನಂತೆ ಒಬ್ಬೊಬ್ಬರೆ ಎದ್ದು ಗುರುಗಳ ಪಾದಕ್ಕೆರಗಿದರು. ಗುರುಗಳು ಒಬ್ಬೊಬ್ಬರ ನೆತ್ತಿಯನ್ನಾಘ್ರಾಣಿಸಿ ತಲೆಯ ಮೇಲೆ ವರದಹಸ್ತವನ್ನಿಟ್ಟು, ಕಣ್ಣಲ್ಲಿ ಕಣ್ಣಿಟ್ಟು ಪ್ರೇಮಪೂರ್ಣ ದೃಷ್ಟಿಯಿಂದ ದಿಟ್ಟಿಸಿ ನೋಡಿ, ಪುನಃ ಆಶೀರ್ವದಿಸಿ ಅವರಿಗೆ ಅಪ್ಪಣೆಕೊಟ್ಟರು. ಗುರುವಿರಹ, ಸಂಸಾರಸಾಗರದ ಭಯ, ಆಪ್ತಬಂಧುಗಳನ್ನು ಕೂಡುವ ಉತ್ಸುಕತೆ ಮುಂತಾದ ಸಂಮಿಶ್ರಭಾವಗಳಿಂದ ಯುಕ್ತರಾದ ಆ ಕುಮಾರರು ಮೆಲ್ಲಮೆಲ್ಲನೆ ಅಡಿಯಿಡುತ್ತ ಆಶ್ರಮಸೀಮಾಂತದ ವರೆಗೆ ಬಂದರು. ಗುರುಗಳೂ ಅಲ್ಲಿಯವರೆಗೆ ಅವರೊಡನೆ ಇದ್ದರು. ಅಲ್ಲಿ ಮತ್ತೊಮ್ಮೆ ಸದ್ಗುರುಗಳ ಅಪ್ಪಣೆ ಪಡೆದು ಅವರು ತಮ್ಮ ತಮ್ಮ ಮನೆಗಳನ್ನು ಕುರಿತು ಹೊರಟರು.

# ೧೫. ಚತುರ್ವರ್ಣಗಳ ಅರ್ಥ

ಉತ್ಕಟವಾದ ಉಪಾಸನೆ, ನಿಶ್ಚಿಂತವಾದ ಈಶಚಿಂತನೆ, ತತ್ವವಿಚಾರ ಇವುಗಳಿಗೆ ಅನುಕೂಲವಾದ ಒಂದು ರಮ್ಯ ಆಶ್ರಮದಲ್ಲಿ ಸಾಯಂಕಾಲದ ಸಮಯದಲ್ಲಿ ಗುರುಶಿಷ್ಯರೆಲ್ಲರೂ ದಿನಾಲು ಒತ್ತಟ್ಟಿಗೆ ಕೂಡುವಂತೆ ಒಂದು ದಿನ ಕುಳಿತಾಗ, ಎಲ್ಲ ಸಮಾಜಗಳಲ್ಲಿಯೂ ಒಂದಿಲ್ಲೊಂದು ಪರಿಯಿಂದ ಪ್ರಚಲಿತವಿರುವ ಚತುರ್ವರ್ಣಗಳ ಬಗ್ಗೆ ಚರ್ಚೆಯು ನಡೆಯಿತು. ಅವುಗಳಿಗೆ ಚತುರ್ವರ್ಣಗಳೆಂಬ ಹೆಸರು ಇರಲಿ ಬಿಡಲಿ, ಅವು ಜಗತ್ತಿನಲ್ಲಿಯ ಪ್ರತಿಯೊಂದು ಸಮಾಜದ ಘಟಕಗಳಿರುವವು. ಇಷ್ಟೇ ಅಲ್ಲ. ಆ ವರ್ಣಗಳಿಗೆ ವಿಶಿಷ್ಟವಾದ ಗುಣಕರ್ಮಗಳು ಪ್ರತಿಯೊಂದು ವ್ಯಕ್ತಿಯಲ್ಲಿ ಹೆಚ್ಚು ಕಡಿಮೆ ಪ್ರಮಾಣದಲ್ಲಿ ಕಂಡುಬರುವವು. ಹೀಗೆ ಸಮಾಜದ ಘಟಕಗಳಾದ ಚತುರ್ವರ್ಣಗಳು ಹೇಗೆ ಹುಟ್ಟಿದವು, ಅವುಗಳ ಲಕ್ಷಣಗಳೇನು, ಎಂಬುದನ್ನು ಕುರಿತು ಅಲ್ಲಿ ಮಾತು ನಡೆದವು. ಆಗ ಗುರುವು ಈ ಮಹತ್ವದ ವಿಷಯವನ್ನು ಕುರಿತು ಉಪನಿಷತ್ತಿನಲ್ಲಿರುವ ವಿಚಾರಗಳ ಮುಖ್ಯಾಂಶವನ್ನು ಈ ಕೆಳಗಿನಂತೆ ವಿವರಿಸಿದನು.

'ಪ್ರಿಯ ಶಿಷ್ಯರೇ, ಚತುರ್ವರ್ಣದ ಪ್ರಕ್ರಿಯು ಸಮಾಜದ ರಚನೆಯ ದೃಷ್ಟಿಯಿಂದ ಮಹತ್ವದ್ದಿರುವದು. ಪ್ರಪಂಚದಲ್ಲಿ ಅನೇಕ ಮಾನವೀಸಮಾಜಗಳು ಪೃಥ್ವಿಯ ತುಂಬ ಹಬ್ಬಿರುವವು. ಅವು ವಿಶಿಷ್ಟ ನಿಯಮಗಳಂತೆ ನಡೆದರೆ ಮಾತ್ರ ಬಾಳಿಬೆಳೆಯುವವು, ಇಲ್ಲದಿದ್ದರೆ ತೀವ್ರವೆ ಅಳಿದುಹೋಗುವವು. ಪುರುಷನ ಶರೀರವು ಚನ್ನಾಗಿರಲಿಕ್ಕೆ ಮತ್ತು ಬೆಳೆಯಲಿಕ್ಕೆ ಅದರಲ್ಲಿಯ ವಿವಿಧ ಘಟಕಗಳಾದ ಪಂಚಭೂತಾದಿಗಳು ಸಮವಾಗಿ ತಮ್ಮ ತಮ್ಮ ಕಾರ್ಯ ಮಾಡುವದು ಅವಶ್ಯವಿರುವಂತೆ, ಸಮಾಜಪುರುಷನು ಚನ್ನಾಗಿದ್ದು ಬೆಳೆಯಲಿಕ್ಕೆ ಅವನ ಘಟಕಗಳಾದ ಚತುರ್ವರ್ಣಗಳು ತಮ್ಮ ತಮ್ಮ ಕರ್ತವ್ಯಗಳನ್ನು ಯಥಾಯೋಗ್ಯವಾಗಿ ಮಾಡುವದು ಅವಶ್ಯವಿರುವದು. ಆ ಘಟಕಗಳ ಪರಸ್ಪರ ಸಂಬಂಧವು ತಪ್ಪಿ ಅವುಗಳಲ್ಲಿ ವಿರೋಧವುಂಟಾಯಿತೆಂದರೆ ಪುರುಷನು ನಾಶಹೊಂದುವನು. ಸಮಾಜಗಳ ಹಾಡಾದರೂ ಹಾಗೆಯೆ ಇರುವದು.

'ಸಮಾಜದಲ್ಲಿ ನಾಲ್ಕು ವರ್ಣಗಳು ಮುಖ್ಯ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬುವೆ ಅವುಗಳ ಹೆಸರುಗಳು. ಆರ್ಯಾವರ್ತದಲ್ಲಿ ವಾಸ ಮಾಡುವ ಸಮಾಜದಲ್ಲಿ ಈ ಹೆಸರುಗಳು ರೂಢವಿರುವವು. ಜಗತ್ತಿನಲ್ಲಿಯ

ಅನ್ಯದೇಶಗಳಲ್ಲಿ ಈ ಹೆಸರುಗಳು ರೂಢವಿಲ್ಲ. ಆದರೆ ಈ ಹೆಸರುಗಳು ರೂಢವಿರುವದು ಅಷ್ಟೊಂದು ಮಹತ್ವದ ಸಂಗತಿಯಲ್ಲ. ಈ ಹೆಸರುಗಳಿಂದ ನಿರ್ದಿಷ್ಟವಾದ ವಸ್ತುವು ಆಯಾ ಸಮಾಜಗಳಲ್ಲಿ ಇರುವದೆಂಬಲ್ಲಿ ಸಂಶಯವಿಲ್ಲ. ಬ್ರಾಹ್ಮಣ್ಯ, ಕ್ಷಾತ್ರವೃತ್ತಿ, ವೈಶ್ಯವೃತ್ತಿ ಮತ್ತು ಶೂದ್ರವೃತ್ತಿ ಇವು ಎಲ್ಲ ಸಮಾಜಗಳಲ್ಲಿ ಇದ್ದೇ ಇರುವವು. ಇವುಗಳಲ್ಲಿ ಒಂದು ಇಲ್ಲದಿದ್ದರೂ ಸಮಾಜವು ನಡೆಯದು. ಇವೆಲ್ಲ ಸಮವಾಗಿ ಅನ್ಯೋನ್ಯ ಸಂಬಂಧಗಳನ್ನಿಟ್ಟುಕೊಳ್ಳುವತನಕ ಆಯಾ ಸಮಾಜವು ಉತ್ತಮ ಸ್ಥಿತಿಯಲ್ಲಿರುವದು. ಇವುಗಳಲ್ಲಿ ಯಾವದೇ ಒಂದು ಪ್ರಮಾಣದ ಹೊರಗೆ ಅಳತೆಗೆಟ್ಟು ಹೆಚ್ಚುಕಡಿಮೆಯಾದರೂ ಸಮಾಜದ ಸಮತೆಯು ಕೆಟ್ಟುಹೋಗುವದು. ಇವುಗಳಲ್ಲಿ ಬ್ರಾಹ್ಮಣ್ಯವು ಜ್ಞಾನಪ್ರಧಾನವು, ಕ್ಷಾತ್ರವೃತ್ತಿಯು ಶೌರ್ಯಪ್ರಧಾನವು, ವೈಶ್ಯವೃತ್ತಿಯು ಸಂಚಯ ಅಥವಾ ಸಂಗ್ರಹ ಗುಣವುಳ್ಳದ್ದು ಮತ್ತು ಶೂದ್ರವೃತ್ತಿಯು ಸೇವಾಭಾವದಿಂದ ಪರಿಪೂರ್ಣವು. ಸತ್ಯಾಸತ್ಯ ವಿವೇಕಕ್ಕಾಗಿ ಜ್ಞಾನವು ಬೇಕು, ಸಂರಕ್ಷಣಕ್ಕಾಗಿ ಶೌರ್ಯವು ಅವಶ್ಯ, ಅಸ್ತಿತ್ವಕ್ಕಾಗಿ ಪದಾರ್ಥಸಂಗ್ರಹವು ಅಪರಿಹಾರ್ಯವು ಮತ್ತು ಎಲ್ಲರ ಪೋಷಣೆಗಾಗಿ ದುಡಿಮೆಯು ಬಿಡದ ಕರ್ಮವು. ಈ ನಾಲ್ಕೂ ಯೋಗ್ಯ ಪ್ರಮಾಣದಲ್ಲಿರುವದು ಅವಶ್ಯವು. ಬರಿಯ ಜ್ಞಾನವು ಕರ್ಮಹೀನವಿದ್ದರೆ ವ್ಯರ್ಥವು. ಬರಿಯ ಶೌರ್ಯವು ಜ್ಞಾನ ಬಿಟ್ಟು ನಡೆದರೆ ಕ್ರೌರ್ಯದಲ್ಲಿ ಪರಿಣಮಿಸುವದು. ಶೌರ್ಯಸಾಹಸಗಳ ಸಹಾಯವಿಲ್ಲದ ಸಂಗ್ರಹವು ತನ್ನನ್ನು ತಾನು ಸಂರಕ್ಷಿಸಿಕೊಳ್ಳಲಾರದೆ ಸೂರೆಗೊಳ್ಳುವವರ ಪಾಲಾಗುವದು. ಇವುಗಳಿಗೆ ಪೋಷಕವಾದ ಸೇವೆ ಅಥವಾ ದುಡಿಮೆ ಇಲ್ಲದಿದ್ದರೆ ಇವಾವೂ ಬದುಕಲಾರವು. ಈ ರೀತಿ ಇವೆಲ್ಲ ಪರಸ್ಪರ ಸಹಾಯಕವೂ ಪೋಷಕವೂ ಇರುವವು ಮತ್ತು ಇವೆಲ್ಲ ಕೂಡಿ ಸಮಾಜವೆಂಬ ವಸ್ತುವು ಸಿದ್ಧವಾಗುವದು. ಈ ತತ್ವಗಳನ್ನು ಉಪನಿಷತ್ಕಾರರು ಒಂದು ರೂಪಕದ ಮುಖಾಂತರ ವಿವರಿಸಿದ್ದಾರೆ. ಅದನ್ನು ನಾನು ನಿಮಗೆ ಹೇಳುವೆನು, ಚಿತ್ತೈಸಿರಿ.

'ಉಪನಿಷತ್ಕಾರರು ಅನ್ನುವದೇನಂದರೆ, ಮೊಟ್ಟಮೊದಲು ಶುದ್ಧ ಜ್ಞಾನಮಯ ಅಥವಾ ಕೇವಲ ಚಿನ್ಮಯ ಬ್ರಹ್ಮವೊಬ್ಬನೆ ಇದ್ದನು. ಆದರೆ ಹಾಗೆ ಇರುವದರಿಂದ ತೃಪ್ತಿಹೊಂದದೆ ಕೇವಲ ಜ್ಞಾನಪ್ರಧಾನವಾದ ದೇವತೆಗಳನ್ನು ತನ್ನ ಏಕರೂಪ ಅನಂತ ಶಕ್ತಿಯೊಳಗಿಂದ ಆ ಬ್ರಹ್ಮನು ನಿರ್ಮಿಸಿದನು.

ಅಷ್ಟರಿಂದ ತನ್ನ ಇಷ್ಟಸಂಕಲ್ಪವು ಸಿದ್ಧಿಗೆ ಹೋಗುವದೆಂದು ಅವನಿಗೆ ತೋರದ್ದ ರಿಂದ ಅವನು ಬಲ, ತೇಜ, ವೀರ್ಯ, ಆಳುವ ಸಾಮರ್ಥ್ಯ, ನಿರ್ಭಯತೆ ಮುಂತಾದ ಕ್ಷಾತ್ರಗುಣಗಳಿಂದ ಯುಕ್ತವಾದ ಇಂದ್ರ, ವರುಣ, ಸೋಮ, ರುದ್ರ, ಪರ್ಜನ್ಯ, ಯಮ, ಮೃತ್ಯು, ಈಶಾನ ಎಂಬ ದೇವತೆಗಳನ್ನು ( ಶಕ್ತಿಗಳನ್ನು ) ಹುಟ್ಟಿಸಿದನು. ಇವರು ಅತ್ಯಂತ ಬಲಿಷ್ಠರು, ಇವರನ್ನು ಬ್ರಾಹ್ಮಣ ದೇವತೆಗಳು ಸಹ ಮನ್ನಿಸುವರು. ಆದರೆ ಬ್ರಾಹ್ಮಣ ದೇವತೆಗಳೆ ಈ ಕ್ಷತ್ರಿಯ ದೇವತೆಗಳ ಆಶ್ರಯಸ್ಥಾನವು. ಬ್ರಹ್ಮನು ಇಷ್ಟರಿಂದ ಸಂತುಷ್ಟನಾಗಲಿಲ್ಲ. ಅವನು ಆ ಮೇಲೆ ವಸು, ರುದ್ರ, ಆದಿತ್ಯ, ವಿಶ್ವದೇವರು, ಮರುತರು ಎಂಬ ವೈಶ್ಯ ದೇವತೆಗಳನ್ನು ನಿರ್ಮಿಸಿದನು. ಇದರಿಂದಲೂ ಅವನ ಕಾರ್ಯ ಸಿದ್ಧಿಯಾಗಲಿಲ್ಲ. ಆಗ ಪೂಷಣ ಎಂಬ ಶೂದ್ರ ದೇವತೆಯನ್ನು ಹುಟ್ಟಿಸಿದನು. ಈ ದೇವತೆಯು ಎಲ್ಲರನ್ನೂ ಪೋಷಿಸುವದು. ಇದರಿಂದಲೂ ಬ್ರಹ್ಮನ ಸಂಕಲ್ಪ ಪರಿಪೂರ್ತಿಯಾಗಲಿಲ್ಲ. ಆದುದರಿಂದ ಕೊನೆಗೆ ಶ್ರೇಯಸ್ಕರವಾದ ಧರ್ಮ ದೇವತೆಯನ್ನು ನಿರ್ಮಿಸಿದನು. ಈ ದೇವತೆಯು ಎಲ್ಲಕ್ಕೂ ಶ್ರೇಷ್ಠವು, ಯಾಕಂದರೆ ಈ ಮೂಲಕವೆ ಮಿಕ್ಕವರು ಸಮರ್ಥರಾಗಬಲ್ಲರು. ತಮ್ಮ ಧರ್ಮವನ್ನು ಬಿಟ್ಟವರು ಬಾಳಲಾರರು. ಧರ್ಮಿಷ್ಠರಾದ ಅಬಲರು ಸಹ ಧರ್ಮಭ್ರಷ್ಟರಾದ ಪ್ರಬಲರನ್ನು ಗೆಲ್ಲುವರು. ಧರ್ಮದೇವತೆಯೆ ಸತ್ಯದೇವತೆಯು. ಸತ್ಯವನ್ನು ನುಡಿಯುವವನು ಧರ್ಮವನ್ನು ನುಡಿಯುತಿರುವನು, ಎಂದು ಜನರು ಅನ್ನುವರು, ಧರ್ಮವನ್ನು ನುಡಿಯುವವನು ಸತ್ಯವನ್ನು ನುಡಿಯುತಿರುವನೆನ್ನುವರು. ಈ ರೀತಿ ಸತ್ಯ ಮತ್ತು ಧರ್ಮ ಇವೆರಡೂ ಒಂದೇ ಇರುವವು. ಒಂದೇ ವಸ್ತುವಿಗೆ ಇವೆರಡು ಹೆಸರುಗಳು. ದೇವಲೋಕದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ದೇವತೆಗಳನ್ನು ನಿರ್ಮಾಣ ಮಾಡಿದಂತೆ ಬ್ರಹ್ಮನು ಮನುಷ್ಯಲೋಕದಲ್ಲಿಯೂ ಆಯಾ ದೇವತೆಗಳಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರನ್ನು ಹುಟ್ಟಿಸಿದನು. ಇವರೆಲ್ಲರೂ ತಮ್ಮ ಸ್ವಭಾವಗುಣಗಳಂತೆ ಆಚರಿಸುವದೆ ಅವರ ಧರ್ಮವೆನಿಸುವದು.

'ಪ್ರಿಯ ಕುಮಾರರೇ, ಈ ರೂಪಕದ ಅರ್ಥವನ್ನು ನೀವು ಚನ್ನಾಗಿ ತಿಳಿದುಕೊಂಡರೆ ನಿಮಗೆ ವರ್ಣರಹಸ್ಯವು ತಿಳಿಯುವದು. ದೇವತೆಗಳೆಂದರೆ ಶಕ್ತಿಗಳು. ಪುರುಷಾಕೃತಿಗಳನ್ನು ಕಲ್ಪಿಸಿದ್ದರಿಂದ ಅವು ರೂಪಕದಲ್ಲಿ ಪುರುಷ ವಾಚಕವೆಂದು ಸಂಬೋಧಿಸಲ್ಪಟ್ಟಿರುವವು. ಜ್ಞಾನ, ವೀರ್ಯ, ವ್ಯವಹಾರ

ಮತ್ತು ಸೇವೆ ಈ ನಾಲ್ಕು ವೃತ್ತಿಗಳು ಅನುಕ್ರಮವಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರಿಗೆ ಸ್ವಾಭಾವಿಕವಾದವುಗಳು. ಆಯಾ ವೃತ್ತಿಯಿಂದ ಅವರವರು ಆಯಾ ವರ್ಣದವರೆನಿಸುವರು. ಆ ವೃತ್ತಿಯೆ ಆಯಾ ವರ್ಣದ ಮುಖ್ಯ ಲಕ್ಷಣವು. ಪ್ರತಿಯೊಬ್ಬನು ತನ್ನ ವೃತ್ತಿಯಂತೆ ಅಥವಾ ತನ್ನ ಮೂಲ ಸ್ವಭಾವದಂತೆ ನಡೆಯಲು ಪ್ರಯತ್ನಿಸಬೇಕು. ಯಾವನು ಯಾವ ವೃತ್ತಿಯವನು ಇರುವನು ಇದನ್ನು ಶೋಧಿಸಿ ಅವನಿಗೆ ಆ ವೃತ್ತಿಗನುಗುಣ ವಾದ ಮಾರ್ಗವನ್ನು ಹೇಳುವುದೆ ಗುರುವಿನ ಮುಖ್ಯ ಕಾರ್ಯವು. ಎಳೆತನ ದಲ್ಲಿಯೆ ಅವರವರ ಮೂಲ ಸ್ವಭಾವವನ್ನು ಕಂಡುಹಿಡಿದು ವಿದ್ಯಾರ್ಥಿಗಳನ್ನು ಯೋಗ್ಯ ಹಾದಿಗೆ ಹಚ್ಚುವದೆ ಅತ್ಯುತ್ತಮ ಶಿಕ್ಷಣಪದ್ಧತಿಯ ಗುಟ್ಟು ಇರುವದು. ಯಾವ ಸಮಾಜವು ಇತ್ತ ಲಕ್ಷ್ಯಗೊಟ್ಟು, ವ್ಯಕ್ತಿಗಳಿಗೆ ಅವರವರ ಮೂಲ ಸ್ವಭಾವದಂತೆ ಬೆಳೆಯಗೊಟ್ಟು, ಅವರಲ್ಲಿಯ ಮುಪ್ತ ವೃತ್ತಿಗಳನ್ನೆಲ್ಲ ಸಂಯಮಿಸಿ, ಅವರಿಂದ ಎಲ್ಲಕ್ಕೂ ಹೆಚ್ಚು ಸಮಾಜಸೇವೆ ಯಾಗುವಂತೆ ಆಸ್ಪದವನ್ನೂ ಅನುಕೂಲತೆಗಳನ್ನೂ ಕಲ್ಪಿಸಿಕೊಡುವದೊ, ಅದೇ ಶ್ರೇಷ್ಠ ಸಮಾಜವು. ಆ ಸಮಾಜವೆ ಧರ್ಮದಿಂದ ನಡೆದಿರುವದೆನ್ನ ಬಹುದು, ಆ ಸಮಾಜವೇ ಸತ್ಯವನ್ನು ಪರಿಪಾಲಿಸುತ್ತಿರುವದೆನ್ನಬಹುದು. ಈ ಧರ್ಮಬಂಧನವು ಸಡಿಲಾದರೆ ಸಮಾಜವು ನಡೆಯದು, ತಡೆಯದು. ಧರ್ಮಬಂಧನದಿಂದಲೆ ಸಮಾಜವು ಸಮವಾಗಿ ನಡೆದು ಸುಖಿಯಾಗಬಲ್ಲದು.'

ದೇವಸಮಾಜವೆ ಇರಲಿ, ಮನುಷ್ಯಸಮಾಜವೆ ಇರಲಿ, ಅದರಲ್ಲಿಯ ನಾಲ್ಕೂ ವರ್ಣಗಳು ತಮ್ಮ ತಮ್ಮ ಧರ್ಮದಂತೆ ನಡೆದರೆ ಮಾತ್ರ ಅದು ಪೂರ್ಣತ್ವವನ್ನು ಹೊಂದಬಲ್ಲದು, ಎಂಬ ಬಗ್ಗೆ ಉಪನಿಷತ್ತಿನಲ್ಲಿರುವ ರೂಪಕದ ರಹಸ್ಯವನ್ನು ಕೇಳಿ ಶಿಷ್ಯರು ಆಶ್ಚರ್ಯಚಕಿತರಾದರು. ಗುರುವಚನದಂತೆ ತಮ್ಮ ಮೂಲಧರ್ಮವನ್ನು ಅರಿತುಕೊಂಡು ಅದರಂತೆ ವರ್ತಿಸುವದೆ ತಮ್ಮ ಆದ್ಯ ಕರ್ತವ್ಯವು, ಎಂಬ ಬಗ್ಗೆ ಪೂರ್ಣ ಮನವರಿಕೆಯಾಗಿ ಅವರು ಅದರಂತೆ ತಮ್ಮ ಜೀವನವನ್ನು ರೂಪಿಸುವ ನಿರ್ಧಾರವನ್ನು ಮಾಡಿದರು.

# ೧೬. ಅಜಾತಶತ್ರುವಿನ ಜ್ಞಾನೋಪದೇಶ

ಪುರಾತನಕಾಲದಲ್ಲಿ ಬಾಲಾಕಿ ಎಂಬ ಬ್ರಾಹ್ಮಣನಿದ್ದನು. ಅವನು ಗಾರ್ಗಗೋತ್ರದವನಾದುದರಿಂದ ಅವನಿಗೆ ಗಾರ್ಗ್ಯನೆಂದೂ ಅನ್ನುತಿದ್ದರು. ಪೂರ್ಣ ಬ್ರಹ್ಮಜ್ಞಾನವಿಲ್ಲದಿದ್ದರೂ ಅವನು ಒಳ್ಳೆ ವಕ್ತೃತ್ವಶಾಲಿಯು. ಆ ಮೂಲಕ ಅವನು ಬಹಳ ಗರ್ವಿಷ್ಠನಾಗಿದ್ದನು. ತನ್ನಂಥ ವ್ಯಾಖ್ಯಾನಕಾರರು ಯಾರೂ ಇಲ್ಲೆಂದು ಅವನು ತಿಳಿದಿದ್ದನು. ಒಮ್ಮೆ ಸಂಚರಿಸುತಿರುವಾಗ ಅವನು ಕಾಶೀದೇಶದ ಅರಸನಾದ ಅಜಾತಶತ್ರುವಿನ ಬಳಿಗೆ ಹೋದನು. ಅಲ್ಲಿ ಆ ಅರಸನಿಗೆ ಅವನು, 'ಹೇ ರಾಜನ್, ನಾನು ನಿನಗೆ ಬ್ರಹ್ಮಜ್ಞಾನವನ್ನು ಹೇಳುವೆನು, ಕೇಳುವಂಥವನಾಗು' ಎಂದನು. ಜ್ಞಾನಿಯಾದ ಅರಸನು ಆ ಬ್ರಾಹ್ಮಣನ ಈ ದರ್ಪೋಕ್ತಿಯನ್ನು ಕೇಳಿ ಆಶ್ಚರ್ಯಚಕಿತನಾದನು. ಆದರೆ ದಕ್ಷಿಣೆಯ ಆಶೆಯಿಂದ ಬಂದ ಬ್ರಾಹ್ಮಣನನ್ನು ವ್ಯರ್ಥ ಏಕೆ ನೋಯಿಸಬೇಕು, ಎಂಬ ಭಾವನೆಯಿಂದ ಆ ಕ್ಷತ್ರಿಯಶ್ರೇಷ್ಠನು ಅಂದದ್ದು, 'ಪೂಜ್ಯನೇ, ಈ ನಿನ್ನ ಮಾತಿಗಾಗಿಯೆ ನಾನು ನಿನಗೆ ಒಂದು ಸಾವಿರ ಆಕಳುಗಳನ್ನು ಕೊಡುವೆನು. ಜನಕರಾಜನು ಅತಿ ಉದಾರನಿರುವದರಿಂದ ಜನಕ, ಜನಕ, ಎಂದು ಜನರು ಅವನ ಮೇಲೆ ಮುಗಿಬೀಳುವರು. ನೀನು ಈಗ ನನ್ನ ಕಡೆಗೆ ದಕ್ಷಿಣೆಯ ಆಶೆಯಿಂದ ಬಂದಿರುವಿ. ನಾನು ನಿನಗೆ ಜನಕಮಹಾರಾಜನಷ್ಟು ಕೊಡಲಾರೆನಾದರೂ ನನ್ನ ಕೈಲಾದಮಟ್ಟಿಗೆ ಕೊಡುವೆನು. ಅದನ್ನು ದಯವಿಟ್ಟು ಸ್ವೀಕರಿಸುವಂಥವನಾಗು.' ಈ ಉದಾರ ಭಾಷಣವನ್ನು ಕೇಳಿ ಬ್ರಾಹ್ಮಣನು ಸಂತುಷ್ಟನಾದನು ಮತ್ತು ಬ್ರಹ್ಮಜ್ಞಾನವನ್ನು ಹೇಳಲಾರಂಭಿಸಿದನು.

'ದಾನಶೂರನೇ, ಈ ಆದಿತ್ಯನಲ್ಲಿರುವ ಪುರುಷನನ್ನೆ ನಾನು ಬ್ರಹ್ಮನೆಂದು ಉಪಾಸಿಸುತಿರುವೆನು' ಎಂದು ಬಾಲಾಕಿಯು ನುಡಿದನು. ಅಜಾತಶತ್ರುವು ವಿನಯದಿಂದ ಅಂದದ್ದು, 'ಹೇ ಬಾಲಾಕಿಯೇ, ನನಗೆ ತಿಳಿದಮಟ್ಟಿಗೆ ಅವನು ಬ್ರಹ್ಮನಲ್ಲ, ಆ ಪುರುಷನು ಎಲ್ಲ ಭೂತಗಳ ಶ್ರೇಷ್ಠ ಅರಸನು ಮಾತ್ರ. ಈ ಭಾವದಿಂದ ನಾನು ಅವನನ್ನು ಉಪಾಸಿಸುವೆನು. ಈ ಉಪಾಸನೆಯಿಂದ ಉಪಾಸಕನು ಎಲ್ಲ ಭೂತಗಳ ಅರಸನಾಗಬಲ್ಲನು. ಬ್ರಹ್ಮಜ್ಞಾನದಿಂದ ಮುಕ್ತನಾಗುವಂತೆ ಮುಕ್ತನಾಗಲರಿಯನು.'

ಇದನ್ನು ಕೇಳಿ ಬಾಲಾಕಿಯು, 'ನಾನು ಚಂದ್ರನಲ್ಲಿರುವ ಪುರುಷನೆ ಬ್ರಹ್ಮನೆಂದು ಅವನನ್ನು ಉಪಾಸಿಸುವೆನು' ಎಂದು ಹೇಳಿದನು. ಅದಕ್ಕೆ

ಪ್ರತಿಯಾಗಿ ಅಜಾತಶತ್ರುವು ಅಂದದ್ದು, 'ಬ್ರಾಹ್ಮಣೋತ್ತಮನೇ, ಹೀಗೆ ಹೇಳಬೇಡ. ಯಾಕಂದರೆ ಅವನು ಬ್ರಹ್ಮನಲ್ಲ. ಅವನು ಸೋಮರಾಜನು, ಶುಭ್ರವಸ್ತ್ರ ಪರಿಧಾನಮಾಡಿದ ಶ್ರೇಷ್ಠ ದೇವತೆಯು. ಅವನು ಪುತ್ರಪೌತ್ರರನ್ನು ದಯಪಾಲಿಸುವವನು, ಅಕ್ಷಯ ಅನ್ನವನ್ನು ಕೊಡಬಲ್ಲನು, ಆದರೆ ಅವನ ಉಪಾಸನೆಯಿಂದ ಮುಕ್ತಿಯ ಆಶೆ ಮಾಡುವದು ವ್ಯರ್ಥವು.'

ಗಾರ್ಗ್ಯನು ಪುನಃ ಅಂದದ್ದು, 'ವಿದ್ಯುತ್ತಿನಲ್ಲಿರುವ ಪುರುಷವಿಶೇಷನನ್ನು ನಾನು ಬ್ರಹ್ಮನೆಂದು ಉಪಾಸಿಸುವೆನು. ಇದಕ್ಕೇನನ್ನುವಿ?' ಇದಕ್ಕೆ ಪ್ರತಿಯಾಗಿ ಅಜಾತಶತ್ರುವು, 'ಇದನ್ನು ನಾನು ಒಪ್ಪಲಾರೆನು. ತೇಜಃಸ್ವರೂಪನೆಂದು ಆ ದೇವತೆಯನ್ನು ನಾನು ಉಪಾಸಿಸುವೆನು. ತೇಜವೂ ತೇಜಸ್ವೀ ಪ್ರಜೆಗಳ ಪ್ರಾಪ್ತಿಯೂ ಈ ಉಪಾಸನೆಯ ಫಲಗಳು. ಇದರಿಂದ ಮುಕ್ತಿ ಎಲ್ಲಿಯದು?' ಎಂದು ಕೇಳಿದನು.

ಅರಸನ ಮಾರುತ್ತರಗಳನ್ನು ಕೇಳಿ ಬ್ರಾಹ್ಮಣನು ವಿಸ್ಮಿತನಾದನು. ಇನ್ನು ನಿರುತ್ತರನಾಗುವ ಪ್ರಸಂಗವು ತನ್ನ ಮೇಲೆ ಬರುವದೋ, ಎಂದು ಅವನಿಗೆ ಸ್ವಲ್ಪ ಭಯವೂ ಉಂಟಾಯಿತು. ಅರಸನು ತನಗಿಂತ ಜ್ಞಾನಿಯಿರುವನೆಂಬುದು ಅವನಿಗೆ ಹೊಳೆಯಿತು. ಆದರೆ ತನ್ನ ಒಣ ಹೆಮ್ಮೆಯ ಮೂಲಕ ಈ ಮಾತನ್ನು ಅವನು ಒಪ್ಪುವ ಬಗೆ ಹೇಗೆ? ಪುನಃ ಪ್ರಯತ್ನ ಮಾಡಬೇಕೆಂದು ಬಾಲಾಕಿಯು ಕ್ರಮವಾಗಿ, 'ಆಕಾಶದಲ್ಲಿ, ವಾಯುವಿನಲ್ಲಿ, ಅಗ್ನಿಯಲ್ಲಿ, ಅಪ್ಪಿನಲ್ಲಿ, ಆದರ್ಶದಲ್ಲಿ (ಕನ್ನಡಿಯಲ್ಲಿ) ಕಾಣುವ ಪುರುಷನೆ ಬ್ರಹ್ಮನೆಂದು ನಾನು ಉಪಾಸಿಸುವೆನು' ಎಂದು ಹೇಳಿದನು. ಅಜಾತಶತ್ರುವು ಕ್ರಮವಾಗಿ ಇವೆಲ್ಲವುಗಳಿಗೆ ಯಥಾಯೋಗ್ಯ ಉತ್ತರಗಳನ್ನು ಕೊಟ್ಟನು. ಈ ವಸ್ತುಗಳಲ್ಲಿ ಕಾಣುವ ಪುರುಷರು ಬ್ರಹ್ಮವಲ್ಲ, ಇವೆಲ್ಲ ಬೇರೆ ಬೇರೆ ದೇವತೆಗಳು, ವಿವಿಧ ಫಲಗಳನ್ನು ಕೊಡುವ ಸಾಮರ್ಥ್ಯವುಳ್ಳವರು ಹೊರತು, ಈ ದೇವತೆಗಳ ಉಪಾಸನೆಯಿಂದ ಮುಕ್ತಿಯು ಸಿಗಲರಿಯದು' ಎಂದು ಅರಸನು ತನ್ನ ಸಿದ್ಧಾಂತವನ್ನು ಹೇಳಿದನು.

ಇಷ್ಟೆಲ್ಲ ವಾದವಿವಾದವಾದರೂ ಬಾಲಾಕಿಯು ತಾನು ಜ್ಞಾನಿಯೆನಿಸಿಕೊಳ್ಳಬೇಕು, ಎಂಬ ಹವಣಿಕೆಯನ್ನು ಬಿಡಲಾರದೆ ಹೋದನು. ಪೂರ್ಣಜ್ಞಾನವನ್ನರಿತವನಂತೆ ನಟಿಸಿ ಮತ್ತೆ ಅವನು ಅಜಾತಶತ್ರುವಿಗೆ ಅಂದದ್ದು, 'ಮನುಷ್ಯನು ಮುಂದೆ ಹೊರಟನೆಂದರೆ ಅವನ ಹಿಂದೆ ಆಗುವ ಸಪ್ಪಳವೆ

ಬ್ರಹ್ಮವೆಂದು ನಾನು ಉಪಾಸಿಸುವೆನು.' 'ಬಾಲಾಕಿಯೇ, ಅದು ಪ್ರಾಣ ದೇವತೆಯು ಹೊರತು ಬ್ರಹ್ಮವಸ್ತುವಲ್ಲ. ಪ್ರಾಣದೇವತೆಯು ಉಪಾಸನೆ ಯಿಂದ ಮನುಷ್ಯನು ಆಯುಷ್ಯವಂತನಾಗುವನು, ಬಹುಕಾಲ ಬಾಳುವನು ಮತ್ತು ಅಪಮೃತ್ಯುವಿಗೆ ತುತ್ತಾಗನು. ಇದಕ್ಕೂ ಹೆಚ್ಚಿನದೇನೂ ಇದರಿಂದ ಪ್ರಾಪ್ತವಾಗದು' ಎಂದು ಅಜಾತಶತ್ರುವು ಹೇಳಿದನು.

ಆಗ ಬಾಲಾಕಿಯು ಅಂದದ್ದು, 'ಛಾಯಾಮಯ ಪುರುಷನೆ ಬ್ರಹ್ಮನು. ಅವನನ್ನು ಬ್ರಹ್ಮನೆಂದು ನಾನು ಉಪಾಸಿಸುವೆನು.' ಇದಕ್ಕೆ ಪ್ರತ್ಯುತ್ತರ ವೆಂದು ಅರಸನು, 'ಅದಾಗದು. ಬ್ರಾಹ್ಮಣವರನೇ, ಅವನು ಮೃತ್ಯುವೆನಿಸು ವನು. ಅವನ ಉಪಾಸನೆಯೂ ದೀರ್ಘಾಯುಷ್ಯದಾಯಿಯು. ಅವನು ಬ್ರಹ್ಮನಲ್ಲ, ಅವನ ಉಪಾಸನೆಯಿಂದ ಮೋಕ್ಷಪದವಿಯು ಪ್ರಾಪ್ತವಾಗದು' ಎಂದು ಹೇಳಿದನು.

ಕೊನೆಗೆ ಅತ್ಯಂತ ಕಠಿಣ ಪ್ರಸಂಗದಲ್ಲಿ ವೀರನು ಬ್ರಹ್ಮಾಸ್ತ್ರವನ್ನು ಎಸೆ ಯುವಂತೆ ಬಾಲಾಕಿಯು ಅಂದದ್ದು, 'ಈ ಆತ್ಮನಲ್ಲಿರುವ ಪುರುಷನೆ ಬ್ರಹ್ಮ ನೆಂದು ನಾನು ಉಪಾಸಿಸುವೆನು. ಇದು ಕೊನೆಯ ಮಾತು. ಇದರಾಚೆ ನೀನು ಹೋಗಲಾರಿ.' ಈ ತನ್ನ ಮಾತನ್ನು ಅಜಾತಶತ್ರುವು ಒಪ್ಪುವನೆಂದು ಬ್ರಾಹ್ಮಣನು ತಿಳಿದಿದ್ದನು. ಆದರೆ, 'ಆತ್ಮನಲ್ಲಿರುವ ಪುರುಷನನ್ನು ಆತ್ಮ ವಂತನೆಂದು ನಾನು ಉಪಾಸಿಸುವೆನು. ಈ ಉಪಾಸನೆಯಿಂದ ಉಪಾಸಕನು ಆತ್ಮವಂತನಾಗಬಲ್ಲನು. ಅವನ ಪ್ರಜೆಗಳೂ ಆತ್ಮವಂತರಾಗಬಲ್ಲರು' ಎಂದು ಅರಸನು ನುಡಿದನು. ಇದನ್ನು ಕೇಳಿ ಬಾಲಾಕಿಯು ಬಾಯಿಮುಚ್ಚಿ ಕೊಂಡು ಸ್ವಸ್ಥ ಕುಳಿತನು. ಆಗ ಅರಸನು, 'ಬಾಲಾಕೀ, ಮುಗಿಯಿತೆ ನಿನ್ನ ಮಾತು?' ಎಂದು ಕೇಳಿದನು. ನಿರುಪಾಯನಾಗಿ ಏನೂ ತೋಚದೆ, 'ಮುಗಿಯಿತು, ಇದರಾಚೆ ನಾನೇನೂ ಅರಿಯೆ' ಎಂದು ಬ್ರಾಹ್ಮಣನು ತಲೆ ಬಾಗಿ ನುಡಿದನು ಮತ್ತು 'ನನಗೆ ಇನ್ನು ನಿಜವಾದ ಬ್ರಹ್ಮಜ್ಞಾನವನ್ನು ಹೇಳು' ಎಂದು ವಿದ್ಯಾಭಿಕ್ಷೆಯನ್ನು ಬೇಡಿದನು.

ಓರ್ವ ಬುದ್ಧಿವಂತ ಬ್ರಾಹ್ಮಣನು ತನ್ನ ಕಡೆಗೆ ಜ್ಞಾನಭಿಕ್ಷೆಯನ್ನು ಬೇಡು ವದು ಆ ಕ್ಷತ್ರಿಯಶ್ರೇಷ್ಠನಿಗೆ ಸರಿಬರಲಿಲ್ಲ. ಆದುದರಿಂದ, 'ಸ್ವಾಮಿನ್, ಇದು ಪ್ರತಿಲೋಮವಾಗುವದು, ನೀರು ಏರಿಯ ಮೇಲೆ ಹರಿದಂತಾಗುವದು' ಎಂದು ಅರಸನು ಗುಣುಗುಟ್ಟಿದನು. ಆದರೆ ಮಾಡುವದೇನು, ಪ್ರಸಂಗವೆ ಹಾಗೆ

ಬಂದಿತು. ಸ್ವಲ್ಪ ಹಿಂಜರಿದಂತೆ ಮಾಡಿ ಕೊನೆಗೆ ಅರಸನು ಎದ್ದು ಬಾಲಾಕಿಯ ಕೈಹಿಡಿದು ಅವನನ್ನು ಒಬ್ಬ ಮಲಗಿದ ಮನುಷ್ಯನ ಹತ್ತಿರ ಕರೆದೊಯ್ದನು. ಅಲ್ಲಿ ಮಲಗಿದವನ ಹೆಸರುಗೊಂಡು, 'ಎಲೈ ಸೋಮನೇ, ಏಳುವಂಥವನಾಗು' ಎಂದು ಎಬ್ಬಿಸಿದನು. ಅಷ್ಟರಿಂದ ಅವನು ಏಳಲಿಲ್ಲ. ಆಗ ಅವನನ್ನು ಕೈಯಿಂದ ಅಲುಗಾಡಿಸಿ ಎಬ್ಬಿಸಲು ಅವನು ಎದ್ದನು. ಆಗ ಅಜಾತಶತ್ರುವು, 'ಹೇ ಬಾಲಾಕಿಯೇ, ಈಗ ಮಲಗಿದವನೆ ಈ ಸೋಮನಲ್ಲಿಯ ವಿಜ್ಞಾನಮಯ ಪುರುಷನು. ಅವನು ಮಲಗಿದ್ದನು ಎಂಬುದರ ಅರ್ಥವೇನು, ಬಲ್ಲೆಯಾ? ನಾನು ಅವನನ್ನು ಹೆಸರಿನಿಂದ ಕರೆದಾಗ ಅವನು ಎಲ್ಲಿ ಹೋಗಿದ್ದನು ಇದನ್ನು ಅರಿತಿರುವೆಯಾ? ಕೈಯಿಂದ ಸೋಮನ ದೇಹವನ್ನು ಅಲುಗಾಡಿಸಲು ಆ ವಿಜ್ಞಾನಮಯ ಪುರುಷನು ಎಲ್ಲಿಂದ ಬಂದನು ಇದನ್ನು ಹೇಳಬಲ್ಲೆಯಾ?' ಎಂಬ ಪ್ರಶ್ನೆಗಳನ್ನು ಬಾಲಾಕಿಗೆ ಕೇಳಿದನು. ಬಾಲಾಕಿಯು ಸಮರ್ಪಕ ಉತ್ತರಗಳನ್ನು ಕೊಡಲರಿಯದೆ ಉತ್ಕಂಠಿತನಾಗಿ ಸುಮ್ಮನಿದ್ದನು. ಇದನ್ನು ನೋಡಿ ಅರಸನು ಅಂದದ್ದು, 'ಪ್ರಿಯ ಬಾಲಾಕಿಯೇ, ನಾನು ಎಲ್ಲ ಪ್ರಶ್ನೆಗಳನ್ನು ಬಿಡಿಸಿಹೇಳುವೆನು, ಚಿತ್ತಗೊಟ್ಟು ಕೇಳು. ಈ ಸೋಮನೆಂಬ ಮನುಷ್ಯನ ಶರೀರವು ಮಲಗಿದಂತೆ ಕಂಡರೂ ನಿಜವಾಗಿ ಮಲಗಿದವನು ಈ ಶರೀರಾಂತರ್ಗತವಾದ ವಿಜ್ಞಾನಮಯ ಪುರುಷನೆ. ಪ್ರಾಣಗಳ ಚೇತನಸಾಮರ್ಥ್ಯವನೆಲ್ಲ ಸೆಳಕೊಂಡು ಅವನು ಅಂತರ್ಹೃದಯದಲ್ಲಿರುವ ಆಕಾಶದಲ್ಲಿ ಮಲಗುವನು. ಆಗ ಈ ಮನುಷ್ಯನು ಮಲಗಿರುವನು, ಎಂದು ಜನರು ಅನ್ನುವರು. ಆ ಕಾಲಕ್ಕೆ ಕಾಣುವ, ಕೇಳುವ, ನುಡಿಯುವ, ಬಗೆಯುವ ಶಕ್ತಿಗಳನೆಲ್ಲ ಆ ಜ್ಞಾನಮಯ ಪುರುಷನೆ ಸೆಳೆದುಕೊಂಡಿರುವದರಿಂದ ಆ ಶಕ್ತಿಗಳ ಕ್ರಿಯೆಗಳೆಲ್ಲ ನಿಂತುಹೋಗುವವು. ಆ ಪುರುಷನು ಸ್ವಪ್ನಲೋಕದಲ್ಲಿ ಸಂಚರಿಸುವಾಗ ಈ ಶಕ್ತಿಗಳೆಲ್ಲ ಅವನೊಡನೆಯೆ ಇರುವವು. ಅರಸನು ತನ್ನ ರಾಜ್ಯದಲ್ಲಿ ಸಂಚರಿಸುವಾಗ ಅವನ ಪರಿವಾರವೆಲ್ಲ ಅವನ ಸಂಗಡವೆ ಇರುವಂತೆ ಈ ಶಕ್ತಿಗಳು ಸ್ವಪ್ನಲೋಕದಲ್ಲಿ ಅವನು ಸಂಚರಿಸುತಿರುವಾಗ ಅವನೊಡನೆಯೆ ಇರುವವು. ಅವನು ಆ ಲೋಕದಲ್ಲಿ ಒಳಿತು, ಕೆಡಕು, ಉಚ್ಚ, ನೀಚ ಮುಂತಾದ ಬೇಕಾದ ಸೋಗುಗಳನ್ನು ಹಾಕಿಕೊಂಡು ವಿಹರಿಸುವನು, ಅವನು ಸುಷುಪ್ತಸ್ಥಿತಿಯನ್ನು ಹೊಂದಿದಾಗ ದೇಹದೊಳಗೆ ಎಲ್ಲೆಲ್ಲಿಯೂ ಪಸರಿಸಿದ ಎಪ್ಪತ್ತೆರಡು ಸಾವಿರ ನಾಡಿಗಳಲ್ಲಿರುವ ಸಂವೇದಶಕ್ತಿಯನೆಲ್ಲ ಸೆಳೆದುಕೊಂಡು ಹೃದಯದ ಹತ್ತಿರಿರುವ

ಪುರೀತತ್ ಎಂಬ ಕೋಶದಲ್ಲಿ ಮಲಗಿರುವನು. ಒಂದು ಎಳೆಯ ಹಸುಗೂಸು, ಇಲ್ಲವೆ ದೊಡ್ಡ ಅರಸನು, ಇಲ್ಲವೆ ಮಹಾಜ್ಞಾನಿಯಾದ ಬ್ರಾಹ್ಮಣನು ನಿಶ್ಚಿಂತೆಯಿಂದ ಪರಮನಿದ್ರಾಸುಖವನ್ನು ಅನುಭವಿಸುವಂತೆ ಈ ವಿಜ್ಞಾನಮಯ ಪುರುಷನೂ ಆನಂದದಿಂದ ಮಲಗುವನು. ಎಷ್ಟೆಂದು ಹೇಳಬೇಕು ಈ ವಿಜ್ಞಾನಮಯ ಪುರುಷನ ಮಹಿಮೆಯನ್ನು ! ಜೇಡಹುಳದಿಂದ ತಂತುಗಳು, ಬೆಂಕಿಯಿಂದ ಚಿಕ್ಕ ಸ್ಫುಲಿಂಗಗಳು ಹೊರಹೊಮ್ಮುವಂತೆ ಎಲ್ಲ ಪ್ರಾಣಗಳು, ಸಕಲ ಲೋಕಗಳು, ದೇವಾಧಿದೇವತೆಗಳೆಲ್ಲ ಈ ವಿಜ್ಞಾನಮಯ ಪುರುಷನಿಂದಲೆ, ಆತ್ಮನಿಂದಲೆ ಹುಟ್ಟುವವು. ಪ್ರಾಣವು ಸತ್ಯವಸ್ತುವು ಎಂಬಲ್ಲಿ ಸಂಶಯವಿಲ್ಲ. ಆದರೆ ಆತ್ಮವಸ್ತುವು ಅದರಾಚೆಗಿನ ಪರಾತ್ಪರ ಸತ್ಯವಸ್ತುವು. ಅದೇ ಬ್ರಹ್ಮವು. ಅದರ ಪೂರ್ಣಜ್ಞಾನದಿಂದ, ಅದರ ಉತ್ಕಟ ಉಪಾಸನೆಯಿಂದ ಮೋಕ್ಷವು.'

ಈ ರೀತಿ ಅಜಾತಶತ್ರುವು ಹೇಳಿದ ಬ್ರಹ್ಮಜ್ಞಾನವನ್ನು ಕೇಳಿ ಬಾಲಾಕಿಯ ಹೆಮ್ಮೆಯು ಹಿಂಗಿತು. ಅವನು ಮುಂದೆ ಅಂತರ್ಮುಖವೃತ್ತಿಯುಳ್ಳವನಾದನು ಮತ್ತು ಸಾಧನೆಯಿಂದ ಆತ್ಮಸಾಕ್ಷಾತ್ಕಾರವನ್ನು ಪಡೆದು ಆಮರಣವೂ ಸರ್ವಲೋಕಹಿತದಕ್ಷನಿದ್ದು ಧನ್ಯನಾದನು.

## ೧೭. ಅಮೃತತ್ವವು ಧನದಿಂದ ದೊರಕದು

ಒಂದು ದಿನ ಬೆಳಿಗ್ಗೆ ಎದ್ದು ಯಾಜ್ಞವಲ್ಕ್ಯ ಮುನಿಯು ತನ್ನ ಪ್ರೀತಿಯ ಹೆಂಡತಿಯಾದ ಮೈತ್ರೇಯಿಗೆ, 'ನಾನು ಇನ್ನು ಬೇಗನೆ ಸನ್ಯಾಸಾಶ್ರಮವನ್ನು ಸ್ವೀಕರಿಸುವೆನು. ಅದಕ್ಕೂ ಮುಂಚೆ ನನ್ನ ಆಸ್ತಿಯನೆಲ್ಲ ಕಾತ್ಯಾಯನಿಯ ಮತ್ತು ನಿನ್ನ ನಡುವೆ ಸರಿಯಾಗಿ ಹಂಚಿಬಿಡುವೆನು. ಅಂದರೆ ಮುಂದೆ ಮತ್ತೆ ಕಡಿದಾಟ ಬೇಡ' ಎಂದು ನುಡಿದನು. ಆ ಮುನಿಗೆ ಕಾತ್ಯಾಯನಿ ಮತ್ತು ಮೈತ್ರೇಯಿ ಎಂಬ ಇಬ್ಬರು ಹೆಂಡರು. ಅವರಿಬ್ಬರಲ್ಲಿ ಮೈತ್ರೇಯಿಯು ಒಳ್ಳೆ ಜಿಜ್ಞಾಸುವು ಮತ್ತು ಉಚ್ಚ ಧ್ಯೇಯವುಳ್ಳವಳು, ಕಾತ್ಯಾಯನಿಯು ಉಳಿದ ಸಾಮಾನ್ಯ ಸ್ತ್ರೀಯರಂತೆ ಆಸ್ತಿ ಆಭರಣಾದಿಗಳಲ್ಲಿ ಆಸಕ್ತಿಯುಳ್ಳವಳು.

ಮೇಲಿನಂತೆ ಆಕಸ್ಮಾತ್ತಾಗಿ ತನ್ನ ಗಂಡನು ಮಾತಾಡಿದ್ದನ್ನು ಕೇಳಿ ಮೈತ್ರೇಯಿಯು ವಿಸ್ಮಿತಳಾದಳು. ಇದರ ಕಾರಣವನ್ನಾದರೂ ಕೇಳಬೇಕೆಂದು ಆಕೆಯ ಮನಸ್ಸಿನಲ್ಲಿ ಕುತೂಹಲವುಂಟಾಯಿತು. 'ಹೀಗೆ ಈಗ ಒಮ್ಮೆಲೆ ಸನ್ಯಾಸಾಶ್ರಮವನ್ನು ಸೇರುವ ಕಾರಣವೇನು?' ಎಂದು ಆಕೆ ತನ್ನ ಪತಿಯನ್ನು ಕೇಳಿದಳು. 'ನರೆ ಹಾಯ್ದು ಮುಪ್ಪು ತಲೆದೋರಲಾರಂಭಿಸಿದೆ. ಇನ್ನು ಉಳಿದ ಆಯುಷ್ಯವನೆಲ್ಲ ಬ್ರಹ್ಮಚಿಂತನದಲ್ಲಿಯೆ ಕಳೆಯಬೇಕೆಂದು ನನ್ನ ಉದ್ದೇಶವು. ಮತ್ತಿನ್ನೇನು?' ಎಂದು ಯಾಜ್ಞವಲ್ಕ್ಯನು ಹೇಳಿದನು. ಈ ಮಾತನ್ನು ಕೇಳಿದೊಡನೆಯೆ ನಸುಸಿಟ್ಟಿನಿಂದ, 'ನೀವು ಬ್ರಹ್ಮಚಿಂತನದಿಂದ ಅಮೃತತ್ವವನ್ನು ಪಡೆಯುವ ಉದ್ಯೋಗವನ್ನು ನಡೆಸಿದಿರಿ. ನನಗೆ ಮಾತ್ರ ಈ ನಶ್ವರ ಆಸ್ತಿಯ ಭಾಗವನ್ನು ಕೊಟ್ಟುಬಿಟ್ಟು ಇಲ್ಲಿಯೆ ಕೂಡಿಸಬೇಕೆನ್ನು ವಿರಾ? ನಾನು ಧನಕನಕಗಳಿಂದ ತುಂಬಿದ ಇಡೀ ಪೃಥ್ವಿಯ ಒಡತಿಯಾದರೂ ನನಗೆ ಅಮೃತತ್ವವು ಪ್ರಾಪ್ತವಾಗಬಲ್ಲದೋ?' ಎಂದು ಮೈತ್ರೇಯಿಯು ಕೇಳಿದಳು. ಮುನಿಯು ಈ ಪ್ರಶ್ನೆಗೆ ಸ್ಪಷ್ಟವಾಗಿ 'ಇಲ್ಲ' ಎಂದು ನಕಾರ ದರ್ಶಕ ಉತ್ತರವನ್ನು ಕೊಡಬೇಕಾಯಿತು.

ಹಾಗೆ ಉತ್ತರಕೊಟ್ಟ ಬಳಿಕ ಅವನು ಅಂದದ್ದು, 'ಅಖಿಲ ಸುಖಸಾಧನ ಗಳ ಸ್ವಾಮಿನಿಯಾಗುವದರಿಂದ ಇಲ್ಲಿ ಸಿಕ್ಕತಕ್ಕ ಇಹಲೋಕದ ಎಲ್ಲ ಸುಖವು ನಿನಗೂ ಸಿಗುವದು. ಅಂಥ ದೈವುಳ್ಳವರ ಜೀವನದಂತೆ ನಿನ್ನ ಜೀವನವಾದರೂ ಸುಖಮಯವಾಗುವದು. ಅಮೃತತ್ವವು ಮಾತ್ರ ಅದರಿಂದ ದೊರಕಲರಿಯದು. ಧನದಿಂದ ಅಮೃತಜೀವನವು ದೊರೆಯಲಿಕ್ಕೆ ಅದೇನು ಪೇಟೆಯಲ್ಲಿ ಮಾರಲಿ ಕ್ಕಿಟ್ಟ ವಸ್ತುವಲ್ಲ. ವಿತ್ತದಿಂದ ಅಮೃತತ್ವವನ್ನು ಪಡೆಯಲಿಚ್ಛಿಸುವದೆಂದರೆ ಮೃಗಜಲದಿಂದ ನೀರಡಿಕೆಯನ್ನು ಆರಿಸಲು ಯತ್ನಿಸಿದಂತೆಯೆ ಸೈ.' 'ಇದೇ ಮಾತು ನಿಜವಿದ್ದರೆ ನೀವು ಕೊಡಮಾಡಿದ ಧನಸಂಪತ್ತನ್ನು ಕೈಕೊಂಡು ನಾನಾದರೂ ಮಾಡುವದೇನು? ಅಮೃತಪದವಿಯನ್ನು ಪಡೆಯುವ ಪಥವನ್ನೆ ನನಗೆ ಹೇಳಿರಿ. ಅದೇ ನನಗೆ ಬೇಕಾದದ್ದು. ನಿಮಗೆ ಗೊತ್ತಿದ್ದ ಬ್ರಹ್ಮಜ್ಞಾನ ವನ್ನು ನನಗೆ ನಿವೇದಿಸಿರಿ' ಎಂದು ಉತ್ಸುಕಳಾದ ಮೈತ್ರೇಯಿಯು ಜ್ಞಾನ ಯಾಚನೆಯನ್ನು ಮಾಡಿದಳು.

ತನ್ನ ಅರ್ಧಾಂಗಿಯ ಈ ಮಾತನ್ನು ಕೇಳಿ ಮುನಿಯು ಬಹಳ ಸಂತುಷ್ಟ ನಾದನು. ತನ್ನ ಧರ್ಮಪತ್ನಿಯು ತನಗೆ ಇಷ್ಟು ಸಮಾನಶೀಲಳಿರುವದನ್ನು

ಕಂಡು ಯಾವ ಗಂಡನಿಗೆ ತಾನೆ ಸಂತೋಷವಾಗಲಿಕ್ಕಿಲ್ಲ? ಕೂಡಲೆ, 'ನಲ್ಲೆ, ನನಗೆ ಇಷ್ಟವಾದುದನ್ನೆ ನೀನು ನುಡಿದಿರುವಿ. ನೀನು ನನಗೆ ಬಹಳ ಬೇಕಾದವಳು. ಇತ್ತ ಬಾ. ನನ್ನ ಸಮೀಪ ಕುಳಿತುಕೊಳ್ಳು. ನಿನಗೆ ಜ್ಞಾನವನ್ನು ಹೇಳುವೆನು. ಚಿತ್ತಗೊಟ್ಟು ಕೇಳು. ಬಳಿಕ ಅದರ ನಿದಿಧ್ಯಾಸವನ್ನು ಮಾಡು, ಅಂದರೆ ನಿನಗೆ ಆ ಜ್ಞಾನದ ಸಾಕ್ಷಾತ್ಕಾರವಾಗುವದು' ಎಂದು ಆಕೆಯನ್ನು ತನ್ನ ಬದಿಗೆ ಕರೆದುಕೊಂಡು ಬೆನ್ನಮೇಲೆ ಕೈಯಾಡಿಸಿ ಕಣ್ಣಲ್ಲಿ ಕಣ್ಣಿಟ್ಟು ಆತ್ಮಜ್ಞಾನವನ್ನು ಹೇಳಲಾರಂಭಿಸಿದನು.

'ಪ್ರಿಯಳೆ, ಯಥಾರ್ಥ ವಿಚಾರಮಾಡಿ ನೋಡಿದರೆ ಪ್ರತಿಯೊಬ್ಬನು ಸತತ ತನ್ನ ಆತ್ಮನನ್ನೆ ಅರಸುತಿರುವನು. ಅವನು ಬೇರೆ ಬೇರೆ ಸುಖಗಳ ಬೆನ್ನುಬಿದ್ದಂತೆ ಕಂಡರೂ ನಿಜವಾಗಿ ಅವನು ಆತ್ಮನನ್ನೆ ಅರಸುತಿರುವನು. ಯಾಕಂದರೆ ಆತ್ಮನು ದೊರೆಯುವ ತನಕ ಅವನ ಈ ಹವಣು ಹಿಂಗುವದಿಲ್ಲ ಮತ್ತು ಆತ್ಮನು ದೊರೆತ ಬಳಿಕ ಒಂದು ಕ್ಷಣವಾದರೂ ಈ ಹವಣು ಉಳಿಯುವದಿಲ್ಲ. ಹೆಂಡತಿಯು ಗಂಡನನ್ನು ಪ್ರೀತಿಸುವದು ಗಂಡನ ಇಚ್ಛೆಯಿಂದಲ್ಲ—ಬರಿಯ ಗಂಡನು ತನಗೆ ದೊರೆಯಬೇಕೆಂಬ ಇಚ್ಛೆಯಿಂದಲ್ಲ—ಆದರೆ ಅವನ ಸಹವಾಸದಿಂದ ತನ್ನ ಆತ್ಮನು ತನಗೆ ದೊರೆಯಬೇಕೆಂಬ ಇಚ್ಛೆಯಿಂದ. ಗಂಡನು ಹೆಂಡತಿಯನ್ನು ಪ್ರೀತಿಸುವದು ಹೆಂಡತಿಯ ಇಚ್ಛೆಯಿಂದಲ್ಲ, ಆದರೆ ತನ್ಮುಖಾಂತರ ತನ್ನ ಆತ್ಮನು ತನಗೆ ದೊರೆಯಬೇಕೆಂಬ ಇಚ್ಛೆಯಿಂದ. ತಾಯಿತಂದೆಗಳು ಮಕ್ಕಳನ್ನು ಪ್ರೀತಿಸುವದು ಮಕ್ಕಳ ಪ್ರೀತಿಯ ಮೂಲಕವಲ್ಲ, ಆದರೆ ಅವರಲ್ಲಿ ತಮ್ಮ ಆತ್ಮನು ತಮಗೆ ದೊರೆಯಬೇಕೆಂಬ ಇಚ್ಛೆಯಿಂದ. ಮನುಷ್ಯನು ಧನವನ್ನು ಪ್ರೀತಿಸುವದು ಆ ಧನದ ಮೂಲಕವಲ್ಲ, ಆದರೆ ಆ ಧನದ ಮುಖಾಂತರ ತನ್ನ ಆತ್ಮನು ತನಗೆ ದೊರೆಯಬೇಕು, ಎಂಬ ಇಚ್ಛೆಯಿಂದ. ಮನುಷ್ಯನು ಶ್ರೇಷ್ಠಲೋಕಗಳನ್ನು ಇಚ್ಛಿಸುವದು ಆ ಲೋಕಗಳಿಗಾಗಿಯಲ್ಲ, ಆದರೆ ಅವುಗಳಲ್ಲಿ ತನ್ನ ಆತ್ಮನು ತನಗೆ ದೊರೆಯಬೇಕೆಂಬ ಹವಣಿನಿಂದ. ಮನುಷ್ಯನು ದೇವತೆಗಳನ್ನು ಪ್ರೀತಿಸುವದಾದರೂ ಆ ದೇವತೆಗಳ ಸಹಾಯದಿಂದ ತನ್ನ ಆತ್ಮನ ಪ್ರಾಪ್ತಿಯು ತನಗೆ ಆಗಬೇಕೆಂಬ ಇಚ್ಛೆಯಿಂದಲೆ. ಭೂತಮಾತ್ರಗಳನ್ನು ಪ್ರೀತಿಸುವದಾದರೂ ಇದೇ ಆಶೆಯಿಂದ; ಅವುಗಳ ಮುಖಾಂತರ ತನ್ನ ಆತ್ಮನು ತನಗೆ ದೊರೆಯಬಹುದೆಂಬ ಆಶೆ ಈ ಮಾನವನಿಗೆ. ತಾತ್ಪರ್ಯವೇನಂದರೆ, ಸೃಷ್ಟಿಯಲ್ಲಿಯ ಯಾವದೇ

ವಸ್ತುವನ್ನು ಮನುಷ್ಯನು ಪ್ರೀತಿಸಿದರೂ ಅದು ತನ್ನ ಆತ್ಮನ ಅರಿವು, ಆತ್ಮನ ಸಾಕ್ಷಾತ್ಕಾರವು ತನಗೆ ಪೂರ್ಣ ಆಗಬೇಕು ಮತ್ತು ಅದು ಆ ಪ್ರೀತಿಯ ವಸ್ತುವಿನ ಸಹಾಯದಿಂದ ಆಗಬೇಕು ಎಂಬ ಗುಪ್ತ, ಗೂಢ ಭಾವನೆಯಿಂದಲೆ. ಸಕಲರೂ ಸತತ ಶೋಧಿಸುತಿರುವ ಆ ಆತ್ಮವಸ್ತುವಿನ ಮೂಲಸ್ವರೂಪ ವನ್ನು ನಾವು ಅರಿಯತಕ್ಕದ್ದು. ಆ ಆತ್ಮನೆ ನೋಡಲಿಕ್ಕೆ ಯೋಗ್ಯವಾದಂಥ ವಸ್ತುವು, ಕೇಳಲಿಕ್ಕೆ ಯೋಗ್ಯವಾದಂಥ ವಸ್ತುವು, ವಿಚಾರಿಸಲಿಕ್ಕೆ ಯೋಗ್ಯ ವಾದಂಥ ವಸ್ತುವು, ನಿದಿಧ್ಯಾಸ ಮಾಡಲಿಕ್ಕೆ ಯೋಗ್ಯವಾದಂಥ ವಸ್ತುವು. ಎಲೈ ಮೈತ್ರೇಯಿ, ಆ ಆತ್ಮವಸ್ತುವನ್ನು ನೋಡುವದರಿಂದ, ಕೇಳುವದ ರಿಂದ, ಬಗೆಯುವದರಿಂದ, ಪೂರ್ಣ ತಿಳಿದುಕೊಳ್ಳುವದರಿಂದ ಮಿಕ್ಕ ಎಲ್ಲ ವಿಶ್ವಪದಾರ್ಥಗಳ ಜ್ಞಾನವಾಗುವದು.

'ಪ್ರಿಯ ಮೈತ್ರೇಯಿ, ಆ ಆತ್ಮನ ಮಹಿಮೆಯನ್ನು ಎಷ್ಟೆಂದು ಹೇಳಲಿ? ಈ ವಿಶ್ವವೆಲ್ಲವು ಆವನಿಂದಲೆ ಹೊರಹೊರಟು ಆವನಲ್ಲಿಯೆ ಇರುತಿರುವದು. ಸಮಾಜದ ಮುಖ್ಯ ಘಟಕಗಳಾದ ಮತ್ತು ತಮ್ಮ ನಿಯತ ಸ್ವಕರ್ಮಾಚರಣೆ ಯಿಂದ ಸಮಾಜವನ್ನು ಸುಸ್ಥಿತಿಯಲ್ಲಿಡಲು ಕಾರಣೀಭೂತವಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ವರ್ಣಾದಿಗಳು, ಈ ಆತ್ಮನಲ್ಲಿಯೆ ಇರುವವು. ಸ್ವರ್ಗ ಮೃತ್ಯು ಪಾತಾಲಾದಿ ಲೋಕಗಳು ಈ ಆತ್ಮನನ್ನು ಬಿಟ್ಟು ಹೊರಗಿಲ್ಲ. ಅದೇ ಪ್ರಕಾರ ಇಂದ್ರವರುಣಾದಿ ನಾನಾ ದೇವತಾಸ್ವರೂಪಿಯಾದ ನಿಸರ್ಗಶಕ್ತಿಗಳೂ ಆತ್ಮನನ್ನು ಹೊರತು ಇಲ್ಲ. ಸಕಲ ವಿವಿಧ ಭೂತಮಾತ್ರಗಳು ಆತ್ಮಗತವೆ ಇರುವವು. ಈ ಆತ್ಮನಲ್ಲಿಯೆ ಇವೆಲ್ಲ ವಾಸವಾಗಿರುವವು. ಈ ಆತ್ಮನೆ ಇವೆಲ್ಲವೂ ಇರುವನು. ಆತ್ಮನನ್ನರಿತುಕೊಂಡರೆ ಇವೆಲ್ಲವುಗಳನ್ನರಿತಂತಾಗು ವದು. ಇದಕ್ಕೆ ದೃಷ್ಟಾಂತವೇನಂದರೆ, ಒಂದು ದೊಡ್ಡ ದುಂದುಭಿಯನು ಬಾರಿಸಲಾರಂಭಿಸಿತೆಂದರೆ ಅದರಿಂದ ಹೊರಡುವ ಧ್ವನಿಯ ಅನಂತ ತೆರೆಗಳು ವಾಯುವನ್ನು ತುಂಬಿಬಿಡುವವು. ನಮಗೆ ಅದು ಯಾವುದೋ ಒಂದು ಧ್ವನಿಯು ಎಂಬ ಸಾಮಾನ್ಯ ಜ್ಞಾನವಾದರೂ ಅದು ದುಂದುಭಿಯಿಂದಲೆ ಹೊರಟದ್ದು ಎಂಬ ವಿಶಿಷ್ಟ ಜ್ಞಾನವು ಆಗುವತನಕ ಅದು ದುಂದುಭಿಧ್ವನಿಯೆ ಎಂಬುದು ತಿಳಿಯದು. ಒಮ್ಮೆ ಗುರುತಾಯಿತೆಂದರೆ ಮುಂದೆ ಎಲ್ಲ ದುಂದುಭಿ ಗಳ ಧ್ವನಿಗಳೂ ಗೊತ್ತಾಗುವವು. ಅಥವಾ ಯಾವನಾದರೂ ಒಂದು ಶಂಖ ವನ್ನು ಊದಲಾರಂಭಿಸಿದನೆಂದು ಕಲ್ಪಿಸುವಾ. ಶಂಖದಿಂದ ಹರಿಯುವ ಆ

ಶಂಖನಾದವನ್ನು ಇದು ಶಂಖದ ನಾದವೆ ಎಂಬ ಜ್ಞಾನವಾಗುವತನಕ ಅವನ್ನು ಗುರುತಿಸುವದು ಅಸಾಧ್ಯ. ಒಮ್ಮೆ ಶಂಖದ ನಾದವು ಹೇಗಿರುವವೆಂಬುದು ತಿಳಿಯಿತೆಂದರೆ ಮುಂದೆ ಎಲ್ಲ ಶಂಖಗಳ ನಾದಗಳೂ ಒಮ್ಮೆಲೆ ತಿಳಿಯುವವು. ಅದೇ ರೀತಿ ಯಾರಾದರೂ ವೀಣೆಯನ್ನು ನುಡಿಸುತಿದ್ದರೆ ಅದರ ಮಂಜುಲ ನಿನಾದವನ್ನು ಗುರುತಿಸುವದು ಕಷ್ಟವು. ಆದರೆ ಒಮ್ಮೆ ವೀಣಾನಾದವ ಗುರುತಾಯಿತೆಂದರೆ ಯಾವುದೇ ವೀಣೆಯನ್ನು ನುಡಿಸಿದರೂ ಅದು ಒಮ್ಮೆಲೆ ತಿಳಿಯುವದು. ಆತ್ಮ ಮತ್ತು ಆತ್ಮನಿಂದ ಹೊರಟ ಅನಂತ ವಸ್ತುಗಳ ಸಂಗತಿಯಾದರೂ ಹೀಗೆಯೆ ಇರುವದು. ವಿಶ್ವದಲ್ಲಿಯ ವಿವಿಧ ವಸ್ತುಗಳ ಬೇರೆ ಬೇರೆ ಜ್ಞಾನವು ನಮಗೆ ಎಷ್ಟು ಆದರೂ ಅವರಿಂದ ನಮ್ಮ ಆತ್ಮ ಜಿಜ್ಞಾಸೆಯು ಎಂದೂ ತಣಿಯಲಾರದು. ಆದರೆ ಆತ್ಮಜ್ಞಾನವಾಯಿತೆಂದರೆ ಮಾತ್ರ ಎಲ್ಲ ವಸ್ತುಗಳು ಅದರಿಂದಲೆ ನಿರ್ಮಿತವಾದುದರಿಂದ ಅವುಗಳ ಜ್ಞಾನದ ಹಸಿವು ಹಿಂಗಿ ನಮ್ಮಲ್ಲಿ ಅತ್ಯಂತ ಸಮಾಧಾನವು ನೆಲೆಗೊಳ್ಳುವದು.

'ಈ ಆತ್ಮನೆಂದರೆ ಅತ್ಯಂತ ಶ್ರೇಷ್ಠ ಅನಾದಿ ಸತ್ಯವಸ್ತುವು. ಹಸಿಯ ಹುಲ್ಲಿನಿಂದ ಹೊತ್ತಿಸಲ್ಪಡುತಿರುವ ಅಗ್ನಿಯಿಂದ ಬಗೆಬಗೆಯ ಹೊಗೆಯ ಸೊತ್ತ ಗಳು ಮೇಲಕ್ಕೇರುವಂತೆ ಈ ಮಹಾವಸ್ತುವಿನಿಂದ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಾಂಗಿರಸ, ಇತಿಹಾಸ, ಪುರಾಣ, ವಿದ್ಯೆಗಳು, ಉಪ-ನಿಷತ್ತುಗಳು, ಶ್ಲೋಕಗಳು, ಸೂತ್ರಗಳು, ವ್ಯಾಖ್ಯಾನಗಳು, ಅನುವ್ಯಾಖ್ಯಾನ ಗಳು ಈ ಮುಂತಾದವುಗಳೆಲ್ಲ ಹೊರಹೊಮ್ಮುವವು. ಇವೆಲ್ಲ ಆ ಆತ್ಮಪುರುಷನ ಉಸುರಿನಂತೆ ಇರುವವು. ಅವನು ಅಖಿಲ ಅನಂತ ವಿಶ್ವಗಳ ಆಶ್ರಯಸ್ಥಾನನು. ಸಮುದ್ರವೆ ಎಲ್ಲ ನೀರುಗಳ ಒಂದೇ ಒಂದು ಆಶ್ರಯವಿರುವಂತೆ, ತ್ವಕ್ಕೇ ಎಲ್ಲ ಸ್ಪರ್ಶಗಳ ಒಂದೇ ಒಂದು ಆಶ್ರಯವಿರುವಂತೆ, ಮೂಗೇ ಎಲ್ಲ ಗಂಧಗಳ ಒಂದೇ ಒಂದು ಆಶ್ರಯವಿರುವಂತೆ, ನಾಲಿಗೆಯೇ ಎಲ್ಲ ರಸಗಳ ಒಂದೇ ಒಂದು ಆಶ್ರಯವಿರುವಂತೆ, ಕಣ್ಣೇ ಎಲ್ಲ ರೂಪಗಳ ಆಶ್ರಯವಿರುವಂತೆ, ಕಿವಿಯೇ ಎಲ್ಲ ಧ್ವನಿಗಳ ಒಂದೇ ಒಂದು ಆಶ್ರಯವಿರುವಂತೆ, ವಾಣಿಯೇ ಎಲ್ಲ ವೇದಗಳ ಒಂದೇ ಒಂದು ಆಶ್ರಯವಿರುವಂತೆ, ಮನಸೇ ಎಲ್ಲ ಸಂಕಲ್ಪಗಳ ಒಂದೇ ಒಂದು ಆಶ್ರಯವಿರುವಂತೆ, ಆತ್ಮನೆ ಎಲ್ಲ ವಿಶ್ವಗತ ವಸ್ತುಗಳ ಪರಮ ಆಶ್ರಯನು. ಕೊನೆಗೆ ಎಲ್ಲವೂ ಮತ್ತು ಎಲ್ಲರೂ ಅವನಲ್ಲಿಯೇ ಲೀನರಾಗತಕ್ಕವರು. ಆತ್ಮನೆ ಎಲ್ಲರ ಪರಮಧಾಮವು, ಅವನೇ ಪರಮಗತಿಯು.

'ಪ್ರಿಯೆ, ಇನ್ನು ವಿಶ್ವವಸ್ತುಗಳು ಈ ಪರಮಾಶ್ರಯದಲ್ಲಿ ಹೇಗೆ ಲೀನವಾಗುವವು ಇದನ್ನು ಹೇಳುವೆನು ಕೇಳು. ಒಂದು ಉಪ್ಪಿನ ಹರಳನ್ನು ನೀರಿನಲ್ಲಿ ಹಾಕಿದರೆ ಅದು ನೀರಿನಲ್ಲಿ ಕೂಡಿ ತದಾಕಾರವಾಗುವದು. ಅದು ಆ ಬಳಿಕ ಬೇರ್ಪಡಿಸಲಿಕ್ಕೆ ಬಾರದು. ಆ ನೀರೆಲ್ಲ ಉಪ್ಪುಪ್ಪು ಆಗುವದು. ಅದರಲ್ಲಿ ಉಪ್ಪು ಪೂರ್ಣ ಬೆರೆತುಹೋಗುವದು. ಅದರಂತೆ ದೃಶ್ಯವಸ್ತುಗಳೆಲ್ಲ ಆ ಪರಮವಸ್ತುವಿನಲ್ಲಿ ಲೀನವಾಗುವವು. ಸರ್ವಾಶ್ರಯವಾದ ಈ ಮಹಾವಸ್ತುವು ಅನಂತವೂ ಅಪಾರವೂ ವಿಜ್ಞಾನಘನವೂ ಇರುವದು. ಆ ಮಹಾನ್ ಆತ್ಮವು ಈ ದೃಶ್ಯಭೂತಗಳೊಡನೆ ಹುಟ್ಟಿದಂತೆ ಮತ್ತು ಅವುಗಳೊಡನೆ ನಷ್ಟವಾದಂತೆ ಕಾಣುವದು. ಆದರೆ ಭೂತಗಳ ದೃಶ್ಯರೂಪಗಳು ನಾಶವಾದ ಬಳಿಕ ಅದು ಪುನಃ ಮೂಲ ವಿಜ್ಞಾನ ಘನ ವಸ್ತುವನ್ನೆ ಸೇರುವದು. ಅಲ್ಲಿ ಅದು ಸಂಜ್ಞಾರಹಿತ (ವಿಶಿಷ್ಟ ಸಂಜ್ಞಾರಹಿತ) ವಾಗುವದು.'

ಇದನ್ನು ಕೇಳಿ ಮೈತ್ರೇಯಿಯು ಅಂದದ್ದು, 'ಇದುವರೆಗೆ ನೀವು ನನಗೆ ಹೇಳಿದ ಜ್ಞಾನವು ತಿಳಿಯಿತು. ಆದರೆ ಸ್ವಾಮಿನ್, ನೀವು ಕಡೆಗೆ ಹೇಳಿದ್ದು ಮಾತ್ರ ನನಗೆ ಚನ್ನಾಗಿ ತಿಳಿಯಲಿಲ್ಲ. ಆ ವಸ್ತುವು ವಿಜ್ಞಾನಘನವಿರುವದೆಂದು ನೀವು ಒಮ್ಮೆ ಹೇಳಿದಿರಿ. ಅಂದಬಳಿಕ ಅದು ಸಂಜ್ಞಾರಹಿತವಾಗುವ ಬಗೆ ಹೇಗೆ?' ಆಗ ಯಾಜ್ಞವಲ್ಕ್ಯನು ನಸುನಕ್ಕು ಅಂದದ್ದು, 'ಪ್ರಿಯೆ, ನಾನು ನಿನಗೆ ತಿಳಿಯದಂತೆ ಹೇಳಿದೆನೆ? ಒಳ್ಳೇದು. ನಾನು ಮತ್ತೆ ವಿವೇಚಿಸುವೆನು ಕೇಳು. ದ್ವೈತವಿದ್ದಲ್ಲಿ ಅಂದರೆ ಎರಡು ವಸ್ತುಗಳಿದ್ದಲ್ಲಿ ಮಾತ್ರ ಒಂದು ಇನ್ನೊಂದನ್ನು ನೋಡುವದು, ಒಂದು ಇನ್ನೊಂದನ್ನು ಕೇಳುವದು, ಒಂದು ಇನ್ನೊಂದನ್ನು ಮಾತಾಡಿಸುವದು, ಒಂದು ಇನ್ನೊಂದನ್ನು ಕುರಿತು ಬಗೆಯುವದು, ಒಂದು ಇನ್ನೊಂದನ್ನು ಅರಿಯುವದು. ಆದರೆ ಪ್ರಿಯೆ, ಯಾವಾಗ ಎಲ್ಲೆಲ್ಲಿಯೂ ಆತ್ಮನೊಬ್ಬನೆ ಸ್ಫುರಿಸುವನೋ, ಎಲ್ಲೆಲ್ಲಿಯೂ ಆತ್ಮವಸ್ತುವೊಂದೆ ಇರುವದೊ ಅಲ್ಲಿ ಯಾರನ್ನು ಯಾರು ಯಾತರಿಂದ ನೋಡಬೇಕು, ಯಾರು ಯಾರನ್ನು ಯಾತರಿಂದ ಕೇಳಬೇಕು, ಯಾರು ಯಾರನ್ನು ಯಾತರಿಂದ ಮಾತಾಡಿಸಬೇಕು, ಯಾರು ಯಾರನ್ನು ಯಾತರಿಂದ ಬಗೆಯಬೇಕು, ಯಾರು ಯಾರನ್ನು ಯಾತರಿಂದ ಅರಿಯಬೇಕು? ಯಾವನು ಇದನೆಲ್ಲ ಅರಿತಿರುವನೋ ಆ ಆತ್ಮನನ್ನು ಯಾರು ಯಾತರಿಂದ ಅರಿಯಬಲ್ಲರು? ಸ್ವತಃ ಜ್ಞಾನಸ್ವರೂಪನಿರುವವನನ್ನು ಯಾರು ಹೇಗೆ ಅರಿಯಬಲ್ಲರು?'

ಈ ರೀತಿ ಪ್ರಶ್ನೆಗಳನ್ನು ಮಾಡಿದಂತೆ ಕಾಣಿಸಿದರೂ ಯಾಜ್ಞವಲ್ಕ್ಯನು ತನ್ನ ಪ್ರಿಯ ಪತ್ನಿಗೆ ಅವುಗಳ ಮುಖಾಂತರವೆ ಸರ್ವವ್ಯಾಪಿ ಏಕಮೇವಾ-ದ್ವಿತೀಯವಾದ ಪರಮ ಆತ್ಮನ ಜ್ಞಾನವನ್ನು ಹೇಳಿದನು. ಆ ಮಹಾ ಸಾಧ್ವಿಯು ಗಂಡನು ಹೇಳಿದ ಜ್ಞಾನವನೆಲ್ಲ ಕಿವಿಗೊಟ್ಟು ಕೇಳಿ ಬ್ರಹ್ಮಚಿಂತನದಲ್ಲಿಯೆ ತನ್ನ ಅಪರ ವಯಸ್ಸನ್ನು ಕಳೆಯಬೇಕೆಂದು ನಿಶ್ಚಯಿಸಿ ತನ್ನ ಬಯಕೆಯನ್ನು ಆತನಿಗೆ ಹೇಳಿಕೊಂಡಳು. ಆಗ ಆಸ್ತಿಯನ್ನು ವಿಭಾಗಿಸಿಕೊಡುವ ಗೋಜಿಗೆ ಹೋಗದೆ ಅದನೆಲ್ಲ ಕಾತ್ಯಾಯನಿಯ ಪಾಲುಮಾಡಿ ಯಾಜ್ಞವಲ್ಕ್ಯನು ಮೈತ್ರೇಯಿಯನ್ನು ಕರೆದುಕೊಂಡು ಅವಳೊಡನೆ ಒಂದು ರಮ್ಯವಾದ ಆಶ್ರಮ ದಲ್ಲಿ ಇರತೊಡಗಿದನು. ಅಲ್ಲಿ ಅವರಿಬ್ಬರೂ ಮುಂದೆ ತೀವ್ರಸಾಧನದಿಂದ ಸಮಾಧಿಸುಖವನ್ನು ಅನುಭವಿಸಿ ತಮ್ಮೆಡೆಗೆ ಬಂದವರಿಗೆ ಜ್ಞಾನಮಾರ್ಗವನ್ನು ಉಪದೇಶಿಸಿ ಸತ್ಕಾರ್ಯವನ್ನು ಮಾಡುತ್ತ ಕೊನೆಗೆ ಆತ್ಮಲೀನರಾದರು.

## ೧೮. ಮಹಾಜ್ಞಾನಿ ಯಾಜ್ಞವಲ್ಕ್ಯ

ವಿದೇಹದೇಶದ ಅರಸನಾದ ಜನಕರಾಯನು ಒಂದು ದೊಡ್ಡ ಯಜ್ಞ ವನ್ನು ಹೂಡಿದನು. ಅವನು ಅತ್ಯಂತ ಉದಾರನೂ, ದಾನಶೂರನೂ ಎಂದು ಹೆಸರಾಗಿದ್ದನು. ಈ ಯಜ್ಞದಲ್ಲಿ ಅರಸನು ಕೊಡಗೈಯಿಂದ ದಕ್ಷಿಣೆ ಹಂಚು ವನು, ಎಂಬ ಆಶೆಯಿಂದ ನಾನಾ ದೇಶದ ಬ್ರಾಹ್ಮಣರು ಅಲ್ಲಿಗೆ ಬಂದರು. ವಿಶೇಷವಾಗಿ ವಿದೇಹಕ್ಕೆ ಸಮೀಪವಿರುವ ಕುರುಪಾಂಚಾಲ ದೇಶದಿಂದ ಅಲ್ಲಿಗೆ ಹೆಚ್ಚು ಜನರು ಸಾಗಿದರು. ಇಂಥ ಯಜ್ಞಯಾಗಾದಿಗಳ ಸಂಧಿಗೆ ಆ ಕಾಲ ದಲ್ಲಿ ಜ್ಞಾನಚರ್ಚೆಗಳು ನಡೆಯುತಿದ್ದವು. ಆ ರೂಢಿಗೆ ಅನುಸರಿಸಿ ಜನಕ ರಾಜನು ಹೂಡಿದ ಯಜ್ಞದಲ್ಲಿ ತತ್ವಚರ್ಚೆಯು ನಡೆಯುವದು ಸ್ವಾಭಾವಿಕವು. ಜನಕನು ಸ್ವತಃ ಈ ವಿಷಯದಲ್ಲಿ ಬಹಳ ಉತ್ಸಾಹಿಯು. ತತ್ವವಾದವೆಂದರೆ ಅವನಿಗೆ ದೊಡ್ಡದೊಂದು ಹಬ್ಬವು. ಆದುದರಿಂದ ವಾದಕ್ಕೆ ವಿಶೇಷ ತೇಜವು ಬರಬೇಕೆಂದು ಅರಸನು ಒಂದು ಯುಕ್ತಿಯನ್ನು ಮಾಡಿದನು. ಪ್ರತಿ ಆಕಳದ ಒಂದೊಂದು ಕೊಂಬಿಗೆ ಐದೈದು ಚಿನ್ನದ ನಾಣ್ಯಗಳನ್ನು ಕಟ್ಟಿ ಒಂದು ಸಾವಿರ

ಆಕಳುಗಳನ್ನು ತುರುಮಂದಿಯಲ್ಲಿ ತಡೆದು ನಿಲ್ಲಿಸಿದನು. ಬಳಿಕ ನೆರೆದ ಬ್ರಾಹ್ಮಣರನ್ನು ಕುರಿತು ಅವನು ಅಂದದ್ದು, 'ಹೇ ಬ್ರಾಹ್ಮಣಶ್ರೇಷ್ಠರೇ, ಇಕೋ ಇಲ್ಲಿ ಒಂದು ಸಾವಿರ ಹೃಷ್ಟಪುಷ್ಟ ಆಕಳು ನಿಂತಿವೆ. ಅವು ಸುವರ್ಣ ನಾಣ್ಯಗಳಿಂದ ಅಲಂಕೃತವಾಗಿರುವದರಿಂದ ಮತ್ತಿಷ್ಟು ಶೋಭಿಸುತಿವೆ. ನಿಮ್ಮಲ್ಲಿ ಎಲ್ಲಕ್ಕೂ ಹೆಚ್ಚಿನ ಬ್ರಹ್ಮಜ್ಞಾನಿಯಿದ್ದವನು ಈ ಆಕಳುಗಳನ್ನು ತನ್ನ ಮನೆಗೆ ಹೊಡೆದುಕೊಂಡು ಹೋಗಬಹುದು.'

ಈ ಮಾತನ್ನು ಕೇಳಿ ಎಲ್ಲ ಬ್ರಾಹ್ಮಣರ ಬಾಯಿಗೆ ನೀರು ಬಿಟ್ಟಿತು. ಆದರೆ ಆಕಳುಗಳನ್ನು ಅಟ್ಟಿಕೊಂಡು ಹೋಗುವ ಧೈರ್ಯವು ಹೇಗೆ ಆಗಬೇಕು? ಎಲ್ಲರೂ ತಮ್ಮತಮ್ಮೊಳಗೆ ಪರಸ್ಪರರ ಕಡೆಗೆ ಆಶ್ಚರ್ಯದಿಂದ ಮಿಕಿಮಿಕಿ ನೋಡತೊಡಗಿದರು. ಆಕಳುಗಳನ್ನು ಒಯ್ಯಲು ಒಬ್ಬನೂ ಮುಂದರಿಯಲಿಲ್ಲ. ಇದನ್ನೆಲ್ಲ ನೋಡಿ ಯಾಜ್ಞವಲ್ಕ್ಯಮುನಿಯು ತನ್ನ ಸಾಮಶ್ರವನೆಂಬ ಶಿಷ್ಯನನ್ನು ಬಳಿಗೆ ಕರೆದು, 'ವತ್ಸಾ, ಈ ಗೋಧನವನ್ನು ನಮ್ಮ ಆಶ್ರಮದ ಕಡೆಗೆ ಸಾಗಿಸುವಂಥವನಾಗು' ಎಂದು ಸಮಾಧಾನವೃತ್ತಿಯಿಂದ ಹೇಳಿದನು. ತಾವೇ ಶ್ರೇಷ್ಠ ಬ್ರಹ್ಮಜ್ಞಾನಿಗಳು, ಎಂಬ ಆತ್ಮವಿಶ್ವಾಸವು ಅಲ್ಲಿ ಕೂಡಿದ ಬ್ರಾಹ್ಮಣರಲ್ಲಿ ಯಾರಿಗೂ ಇಲ್ಲದಿದ್ದರೂ ಯಾಜ್ಞವಲ್ಕ್ಯನು ಧೈರ್ಯದಿಂದ ಗೋವುಗಳನ್ನು ಅಟ್ಟಿಕೊಂಡು ನಡೆದದ್ದು ಅವರಿಗೆ ಸಹನವಾಗಲಿಲ್ಲ. ತಾವೇಕೆ ಮೊದಲು ಯಾಜ್ಞವಲ್ಕ್ಯನಂತೆ ಧೈರ್ಯದಿಂದ ಮುಂದಾಗಲಿಲ್ಲ, ಎಂದು ಕೆಲವರು ಬಗೆದರು; ಹಲವರು ಯಾಜ್ಞವಲ್ಕ್ಯನ ಕೃತಿ ನೋಡಿ ಸಿಟ್ಟಾದರು; ಮತ್ತೆ ಕೆಲವರು ಆಸೂಯೆಪಟ್ಟರು; ಕೆಲವರು ತಿರಸ್ಕಾರವನ್ನು ವ್ಯಕ್ತಮಾಡಿದರು; ಮಿಕ್ಕವರು ಅವನನ್ನು ಹೀಯಾಳಿಸಲನುವಾದರು. ಒಟ್ಟಿಗೇನು, ಎಲ್ಲರೂ ತಮ್ಮ ಅಸಹನಶೀಲತೆಯನ್ನು ಒಂದಿಲ್ಲೊಂದು ಬಗೆಯಿಂದ ವ್ಯಕ್ತಮಾಡಿದರು. ಯಾಜ್ಞವಲ್ಕ್ಯನು ಯಾವುದನ್ನೂ ಲೆಕ್ಕಿಸದೆ ಶಾಂತಚಿತ್ತದಿಂದ ತನ್ನ ಸ್ಥಾನವನ್ನು ಹಿಡಿದು ಕುಳಿತುಬಿಟ್ಟನು. ಮಿಕ್ಕವರೆಲ್ಲರ ಮನಸು ಎಷ್ಟು ಚಲವಿಚಲವಾಗಿತ್ತೊ ಅಷ್ಟು ಅವನು ಸ್ವಸ್ಥಚಿತ್ತನಿದ್ದನು. ಈ ಅವನ ಗಾಂಭೀರ್ಯವನ್ನು ನೋಡಿ ಅವನನ್ನು ಹೇಗಾದರೂ ಘಟ್ಟಿಮಾಡಬೇಕೆಂದು ಉಳಿದ ಬ್ರಾಹ್ಮಣರು ಯೋಚಿಸಲಾರಂಭಿಸಿದರು.

ಜನಕರಾಜನ ಪುರೋಹಿತನಾದ ಅಶ್ವಲನು ಈ ಕೆಲಸಕ್ಕೆ ಮುಂದಾದನು. ಅವನು ಯಾಜ್ಞವಲ್ಕ್ಯನನ್ನು ನೋಡಿ ಬಿಂಕದಿಂದ ಅಂದದ್ದು, 'ಎಲೈ

ಮುನಿಯೇ, ಇಷ್ಟು ಸಾಹಸಮಾತ್ರದಿಂದಲೆ ನಿನಗೆ ಆ ಆಕಳುಗಳು ದಕ್ಕುವ ವೆಂದು ಆಲೋಚಿಸಿರುವಿಯಾ? ನೀನೇ ಎಲ್ಲರಲ್ಲಿ ಶ್ರೇಷ್ಠ ಜ್ಞಾನಿಯೆಂದು ಭಾವಿಸಿರುವಿಯಾ? ಹೀಗೆ ನಿನ್ನಷ್ಟಕ್ಕೆ ನೀನೆ ಹಿರಿಯನೆಂದು ತಿಳಿದರೆ ಸಾಕಾಗದೆಂಬುದನ್ನು ಮರೆತಿರುವೆಯೇನು?' ಈ ದರ್ಪೋಕ್ತಿಯನ್ನು ಕೇಳಿ ಆ ಮುನಿಯು ಕೊಂಚವಾದರೂ ಕದಲದೆ ನಮ್ರತೆಯಿಂದ 'ರಾಜಪುರೋಹಿತನೇ, ಎಲ್ಲ ಬ್ರಹ್ಮಿಷ್ಠರಿಗೆ ನನ್ನ ಪ್ರಣಾಮಗಳು. ನಾನು ಶ್ರೇಷ್ಠನೆಂದು ಹಟ ಹಿಡಿದಿಲ್ಲ. ಹಾಗೆ ಎನಿಸಿಕೊಳ್ಳುವ ಆಕಾಂಕ್ಷೆಯೂ ನನಗಿಲ್ಲ. ಆದರೇನು? ನಾನೊಬ್ಬ ಬಡಬ್ರಾಹ್ಮಣನು. ನನಗೆ ಆಕಳುಗಳ ಆಶೆ ಬಹಳ. ಅದರಿಂದಲೆ ನಾನು ಈ ಸಾಹಸ ಮಾಡಿದ್ದು' ಎಂದು ಹೇಳಿ ಸುಮ್ಮನಾದನು.

ಬರಿಯ ಬಾಯಿಬೆದರಿಕೆಯಿಂದ ಯಾಜ್ಞವಲ್ಕ್ಯನು ಮಣಿಯುವದಿಲ್ಲ ವೆಂಬುದನ್ನು ನೋಡಿ ಅಶ್ವಲನು ಅವನಿಗೆ ಪ್ರಶ್ನೆಮಾಡಿ ವಾಗ್ವಾದದಲ್ಲಿ ಸೋಲಿಸಲನುವಾದನು.

'ಎಲ್ಲ ವಿಶ್ವವು ಮೃತ್ಯುವಿನ ವಶದಲ್ಲಿರುವದು. ಅಂದಬಳಿಕ ಮನುಷ್ಯನು ಯಾವ ಸಾಧನದಿಂದ ಈ ಮೃತ್ಯುವನ್ನು ಗೆಲ್ಲಬಲ್ಲನು?' ಎಂದು ಅಶ್ವಲನು ಯಾಜ್ಞವಲ್ಕ್ಯನಿಗೆ ಪ್ರಶ್ನೆಕೇಳಿದನು. ಸತ್ಯದ ಸೀಮೆಗಂಡ ಮುನಿಗೆ ಇದಾವ ದೊಡ್ಡ ಪ್ರಶ್ನೆಯು? 'ಅಗ್ನಿದೇವತೆಯ ಆರಾಧನೆಯಿಂದ ಮತ್ತು ವಾಣಿಯ ಸಹಾಯದಿಂದ ಪುರುಷನು ಮೃತ್ಯುವನ್ನು ದಾಟುವನು' ಎಂದು ಯಾಜ್ಞವಲ್ಕ್ಯನು ಹೇಳಿದನು. ಆಗ ಪುರೋಹಿತನಾದ ಅಶ್ವಲನು ತನಗೆ ಗೊತ್ತಿದ್ದ ಋಕ್ಕು, ದೇವತೆಗಳು, ಆಹುತಿಗಳು ಇವುಗಳನ್ನು ಕುರಿತು ಕೇಳಿದನು. ಆಗ ಮುನಿಯು ಎಲ್ಲ ಪ್ರಶ್ನೆಗಳಿಗೆ ಸಮರ್ಪಕ ಉತ್ತರಗಳನ್ನು ಕೊಡಲು ಅಶ್ವಲನು ಸುಮ್ಮನಾದನು.

ಒಮ್ಮೆ ಅಶ್ವಲನು ಧೈರ್ಯದಿಂದ ಹೀಗೆ ಪ್ರಶ್ನೆಗಳನ್ನು ಕೇಳಲು ಅನ್ಯರಿಗೂ ಸ್ವಲ್ಪ ಹುರುಪು ಬಂದಿತು. ಜರತ್ಕಾರು ಗೋತ್ರದ ಆರ್ತಭಾಗನೆಂಬವನು ಮುಂದೆ ಬಂದು ಗ್ರಹ ಮತ್ತು ಅತಿಗ್ರಹಗಳನ್ನು ಕುರಿತು ಪ್ರಶ್ನೆಮಾಡಿದನು. ಆಗ ಯಾಜ್ಞವಲ್ಕ್ಯನು ಪ್ರಾಣ, ವಾಣಿ, ಜಿಹ್ವೆ, ಚಕ್ಷು, ಶ್ರೋತ್ರ, ಮನ, ಹಸ್ತ ಮತ್ತು ತ್ವಕ್ಕು (ಇವು ಗ್ರಹಗಳು ಅಂದರೆ ಗ್ರಹಣಸಾಮರ್ಥ್ಯವುಳ್ಳ ಇಂದ್ರಿಯಗಳು) ಇವೆಂಟು ಗ್ರಹಗಳೆಂದೂ ಅಪಾನ, ನಾಮ, ರಸ, ರೂಪ, ಶಬ್ದ, ಕಾಮ, ಕರ್ಮ ಮತ್ತು ಸ್ಪರ್ಶ (ಇವು ಇಂದ್ರಿಯಗಳ ವಿಷಯಗಳು)

ಇವೆಂಟು ಅತಿಗ್ರಹಗಳೆಂಮೂ ಉತ್ತರ ಕೊಟ್ಟನು. ಆಗ 'ಜ್ಞಾನಿಯು ಮರಣಹೊಂದಿದ ಬಳಿಕ ಅವನ ಪ್ರಾಣವು ಹೊರಗೆ ಹೋಗುವದೊ ಇಲ್ಲವೊ?' ಎಂದು ಆರ್ತಭಾಗನು ಮತ್ತೆ ಪ್ರಶ್ನೆಮಾಡಿದನು. ಇದಕ್ಕೆ, 'ಅವನ ಶರೀರವು ಇಲ್ಲಿಯೆ ಬಿದ್ದುಹೋಗುವದು, ಆದರೆ ಪ್ರಾಣವು ಪರಮಾತ್ಮನಲ್ಲಿ ಒಂದಾಗುವದು' ಎಂದು ಯಾಜ್ಞವಲ್ಕ್ಯನು ಉತ್ತರ ಕೊಟ್ಟನು. ಆರ್ತಭಾಗನು ಇಷ್ಟಕ್ಕೆ ಬಿಡದೆ ಪುನಃ 'ಯಾಜ್ಞವಲ್ಕ್ಯನೇ, ಸತ್ತ ಬಳಿಕ ಮನುಷ್ಯನ ವಾಣಿ ಮುಂತಾದವುಗಳು ಅಗ್ನ್ಯಾದಿಗಳಲ್ಲಿ ಲಯಹೊಂದಿ ಹೋಗುವವು. ಆದರೆ ಪುರುಷನು ಎಲ್ಲಿ ಹೋಗುವವನು ಹೇಳಬಲ್ಲೆಯಾ?' ಎಂದು ಕೇಳಿದನು. ಆಗ ಯಾಜ್ಞವಲ್ಕ್ಯನು ಆರ್ತಭಾಗನ ಕೈಹಿಡಿದುಕೊಂಡು ಪ್ರೀತಿಯಿಂದ, 'ಆರ್ತಭಾಗನೇ, ಒಳ್ಳೆ ಪ್ರಶ್ನೆಯನ್ನು ಕೇಳಿದೆ. ಆದರೆ ನಾಲ್ಕು ಜನರಲ್ಲಿ ಇದಕ್ಕೆ ಉತ್ತರ ಕೊಡುವದು ಯೋಗ್ಯವಲ್ಲ. ಇತ್ತ ಬಾ' ಎಂದು ಅವನನ್ನು ನಾಲ್ಕು ಹೆಜ್ಜೆ ಬದಿಗೆ ಕರೆದೊಯ್ದು ಪುರುಷನು ಪುಣ್ಯಕರ್ಮದಿಂದ ಪುಣ್ಯಲೋಕಕ್ಕೂ ಪಾಪದಿಂದ ಪಾಪಲೋಕಕ್ಕೂ ಜ್ಞಾನದಿಂದ ಜನನಮರಣರಹಿತ ಬ್ರಹ್ಮಲೋಕಕ್ಕೂ ಹೋಗುವನೆಂದು ಉಪದೇಶಿಸಿದನು. ಆರ್ತಭಾಗನು ಆ ಉತ್ತರದಿಂದ ವಿರಮಿಸಿದನು.

ಬಳಿಕ ಲಾಹ್ಯಪುತ್ರನಾದ ಭುಜ್ಯುವು, ಪಾರೀಕ್ಷಿತರು ಎಲ್ಲಿರುವರು, ಎಂಬ ಪ್ರಶ್ನೆ ಕೇಳಿದನು. ಆಗ ಅಶ್ವಮೇಧ ಯಜ್ಞವನ್ನು ಮಾಡಿದವರು ಯಾವ ಪುಣ್ಯಲೋಕಕ್ಕೆ ಹೋಗುವರೋ ಅಲ್ಲಿ ಪಾರೀಕ್ಷಿತರು ಹೋಗಿರುವರು, ಎಂದು ಯಾಜ್ಞವಲ್ಕ್ಯನು ಉತ್ತರಕೊಟ್ಟನು.

ಆ ಮೇಲೆ ಚಾಕ್ರಾಯಣ ಉಷಸ್ತನು ಮುಂದೆ ಬಂದು ಕೇಳಿದ್ದೇನಂದರೆ, 'ಹೇ, ಯಾಜ್ಞವಲ್ಕ್ಯ ಮುನಿಶ್ರೇಷ್ಠನೆ, ನಾನು ಅಂಥಿಂಥ ಪ್ರಶ್ನೆಗಳನ್ನು ಕೇಳಲು ಒಲ್ಲೆನು. ಸರ್ವಾಂತರ್ಯಾಮಿಯಾದ ಸಾಕ್ಷಾತ್ ಆತ್ಮಸ್ವರೂಪವನ್ನೆ ನನಗೆ ಹೇಳುವಂಥವನಾಗು. ಅದೇ ನನಗೆ ಅತ್ಯಂತ ಇಷ್ಟವು.' ಈ ಮಾತನ್ನು ಕೇಳಿ ಮುನಿಯು ಅಂದದ್ದು, 'ಉಷಸ್ತನೆ, ನಿನ್ನ ಅಂತರದಲ್ಲಿರುವ ಆತ್ಮನೆ ಸರ್ವಾಂತರದಲ್ಲಿಯೂ ಸಾಕ್ಷಿರೂಪನಾಗಿ ಇರುವನು, ಕಂಡೆಯಾ?' ಈ ಉತ್ತರದಿಂದ ಸಂತುಷ್ಟನಾಗದೆ, 'ಆ ಆತ್ಮನು ಹೇಗಿರುವನು ಹೇಳು' ಎಂದು ಉಷಸ್ತನು ಪುನಃ ಕೇಳಿಕೊಂಡನು. ಆಗ, 'ಪಂಚಪ್ರಾಣಗಳ ಮುಖಾಂತರ ನಾನಾಕ್ರಿಯೆಗಳನ್ನು ಮಾಡಿಸುತ್ತ ಸರ್ವಾಂತರದಲ್ಲಿ ಹುದುಗಿ

ಕೊಂಡಿರುವವನೆ ಆತ್ಮನು. ಅವನೆ ಪರಮಾತ್ಮನು' ಎಂದು ಮುನಿಯು ನುಡಿದನು. ಇದನ್ನು ಕೇಳಿ ಉಷಸ್ತನು ಅಂದದ್ದು, 'ಮುನಿವರ್ಯನೇ, ಕ್ಷಮಿಸಬೇಕು. ನಡೆಯುವ ಪ್ರಾಣಿಯು ಎತ್ತು, ಓಡುವ ಪ್ರಾಣಿಯು ಕುದುರೆಯು, ಎಂದು ಹೇಳುವಂತೆ ನೀನು ಈಗ ಆತ್ಮಸ್ವರೂಪದ ಬಗ್ಗೆ ನನಗೆ ಹೇಳಿರುವಿ! ಇದರಿಂದ ನನ್ನ ಸಮಾಧಾನವಾಗಿಲ್ಲ. ನನಗೆ ಸ್ಪಷ್ಟವಾಗಿ ಆತ್ಮ ಸ್ವರೂಪದ ಅರಿಕೆ ಮಾಡಿಕೊಡಬೇಕು.' ಇದನ್ನು ಕೇಳಿ ನಸುನಗೆಯಿಂದ ಉಷಸ್ತನ ಕಡೆಗೆ ನೋಡಿ ಮುನಿಯು ಅಂದದ್ದು, 'ಪ್ರಿಯ ಉಷಸ್ತನೇ, ಆ ದೃಷ್ಟಿಯನ್ನೇ ನೋಡುವವನನ್ನು, ಆ ಶ್ರೋತ್ರವನ್ನೇ ಕೇಳುವವನನ್ನು, ನಮ್ಮ ಬಗೆಯನ್ನೆ ಬಗೆಯುವವನನ್ನು, ನಮ್ಮ ಅರಿವನ್ನೆ ಅರಿತುಕೊಳ್ಳುವವನನ್ನು ನೀನು ಹೀಗೆ ಬರಿಯ ಬಾಯಿಂದ ಬಣ್ಣಿಸಿದರೆ ತಿಳಿದುಕೊಳ್ಳಲು ಸಮರ್ಥ ನಾಗಬಲ್ಲೆಯಾ? ಅವನ ಸಾಕ್ಷಾತ್ಕಾರವೆ ಆಗಲಿಕ್ಕೆ ಬೇಕು. ಅವನೇ ನಿನ್ನ ಆತ್ಮನು, ಸರ್ವಾಂತರ್ಯಾಮಿಯು. ಮಿಕ್ಕದ್ದೆಲ್ಲ ನಶ್ವರವು. ಆತ್ಮನೊಬ್ಬನೇ ನಿತ್ಯನು.' ಇದನ್ನು ಕೇಳಿ ಉಷಸ್ತನು ತಣ್ಣಗಾದನು.

ಚಾಕ್ರಾಯಣ ಉಷಸ್ತನು ಸಮಾಧಾನಗೊಂಡ ಬಳಿಕ ಕಹೋಲ ಕೌಷೀತಕೇಯನು ಮುಂದಾದನು. ಅವನು ಅಂದದ್ದು, 'ಹೇ ಮುನಿವರನೇ, ಸಾಕ್ಷಾತ್ ಬ್ರಹ್ಮನನ್ನು ಕುರಿತು, ಸರ್ವಾಂತರ್ಯಾಮಿಯನ್ನು ಕುರಿತು, ನನಗೆ ಪೂರ್ಣಜ್ಞಾನವನ್ನು ಹೇಳು.' ಆಗ ಯಾಜ್ಞವಲ್ಕ್ಯನು ಅಂದದ್ದು, 'ಕಹೋ-ಲನೇ, ಅಂತರ್ಯಾಮಿಯನ್ನು ಹುಡುಕಲು ನೀನು ದೂರ ಹೋಗಬೇಕಾಗಿಲ್ಲ. ನಿನ್ನ ಆತ್ಮನೆ ಸರ್ವಾಂತರ್ಯಾಮಿಯಿರುವನು. ಈಗ ನೀನು ನಿನ್ನ ನಶ್ವರ ದೇಹ ಮನ ಆದಿಗಳೆ ನಿನ್ನ ಆತ್ಮನೆಂದು ತಿಳಿದಿದ್ದರೆ ಅದು ತಪ್ಪು. ಇವೆಲ್ಲಕ್ಕೂ ಆಧಾರ ಭೂತ ನಿತ್ಯ ಸತ್‌ವಸ್ತುವೇ ಆತ್ಮನು. ಅವನೇ ಅಂತರ್ಯಾಮಿಯು, ಅವನೇ ಸರ್ವಾಂತರ್ಯಾಮಿಯು, ಅವನೇ ಬ್ರಹ್ಮನು. ಹಸಿವು, ನೀರಡಿಕೆ, ಶೋಕ, ಮೋಹ, ಮುಪ್ಪು, ಸಾವು ಮುಂತಾದವುಗಳೆಲ್ಲವನ್ನು ದಾಟಿದವನೆ ಸರ್ವಾಂತರ್ಯಾಮಿಯು. ಇಂಥ ಆತ್ಮನನ್ನರಿತುಕೊಂಡು ಬ್ರಹ್ಮಜ್ಞಾನಿಗಳು ಹೊನ್ನು ಹೆಣ್ಣು ಮಣ್ಣುಗಳ ಇಚ್ಛೆಯನ್ನು ತೊರೆದು ಆತ್ಮಚಿಂತನದಲ್ಲಿ ನಿಮಗ್ನರಾಗುವರು. ಅವರು ಪುಣ್ಯಲೋಕಗಳ ಬಯಕೆಯನ್ನು ಸಹ ಬಿಟ್ಟು ಬಿಡುವರು. ಬಯಕೆಯೆಂದಬಳಿಕ ಅದು ಯಾವುದೇ ಇದ್ದರೂ ಅದು ಬಂಧಕವು. ಒಂದು ಬಯಕೆಯಿಂದ ಇನ್ನೊಂದು, ಹೀಗೆ ಬಯಕೆಗಳು ಒಂದ

ಕ್ಕೊಂದು ಬೆಳೆಯುತ್ತ ಹೋಗಿ ಮನುಷ್ಯನನ್ನು ಕಟ್ಟಿಬಿಡುವವು. ಆದುದರಿಂದ ಬಯಕೆಗಳನ್ನೆಲ್ಲ ಬಿಟ್ಟುಬಿಡುವದೆ ಮುಕ್ತಿಯ ಹಾದಿಯು. ಬಯಕೆಗಳನ್ನು ಬಿಟ್ಟು ಸತ್ಯವನ್ನು ಶೋಧಿಸುವವನೆ ಜ್ಞಾನಿಯಾಗುವನು. ಜ್ಞಾನಿಯ ಬಾಳ್ವೆಯೆ ನಿಜವಾದ ಬಾಳ್ವೆಯು, ನಿಜಸುಖದ ಬಾಳ್ವೆಯು. ಮಿಕ್ಕ ಬಾಳ್ವೆಯೆಲ್ಲ ದುಃಖಮಯವು.' ಇದನ್ನು ಕೇಳಿ ಕಹೋಲನು ಸಂತುಷ್ಟನಾದನು.

ವಾಚಕ್ನವಿ ಗಾರ್ಗಿ ಎಂಬ ವಿದುಷಿಯು ಆಮೇಲೆ, 'ಗೋಚರ ಪದಾರ್ಥಗಳೆಲ್ಲ ನೀರಿನಿಂದ ವ್ಯಾಪ್ತವಿರುವವೆಂದು ಹೇಳುವರು. ಆದರೆ ನೀರು ಯಾತರಿಂದ ವ್ಯಾಪ್ತವು?' ಎಂದು ಕೇಳಿದಳು. ಆಗ ಯಾಜ್ಞವಲ್ಕ್ಯನು, ವಾಯುವಿನಿಂದ, ಎಂದು ಹೇಳಲು, ಮತ್ತೆ ಪುನಃ ವಾಯುವು ಯಾತರಿಂದ ವ್ಯಾಪ್ತವು, ಎಂದು ಕೇಳುತ್ತ ಕೊನೆಗೆ ಬ್ರಹ್ಮಲೋಕವು ಯಾತರಿಂದ ವ್ಯಾಪ್ತವು, ಎಂದು ಕೇಳಿದಳು. ಅದಕ್ಕೆ ಮುನಿಯು, 'ನಾರೀಮಣಿಯೇ, ಹೀಗೆ ಅತಿಪ್ರಶ್ನೆಗಳನ್ನು ಕೇಳಬೇಡ. ಕೇಳಬಾರದ ಪ್ರಶ್ನೆಗಳನ್ನು ಕೇಳಿದರೆ ನಿನ್ನ ತಲೆ ಕತ್ತರಿಸಿ ಬೀಳುವದು' ಎಂದು ಬೆದರಿಕೆಯ ಮಾತನ್ನಾಡಿದನು. ಈ ನಿಷ್ಠುರ ನುಡಿಯನ್ನು ಕೇಳಿ ಆಕೆ ಆಗ ಸುಮ್ಮನಾದಳು.

ಮುಂದೆ ಆರುಣಿಯು ಯಾಜ್ಞವಲ್ಕ್ಯನನ್ನು ಸೋಲಿಸಲು ಮುಂದಾದನು. ಅವನು ಅಂದದ್ದು, 'ಶ್ರೇಷ್ಠನೇ, ನಾವು ಮದ್ರದೇಶದಲ್ಲಿ ಯಜ್ಞಶಾಸ್ತ್ರದ ಅಭ್ಯಾಸಮಾಡುತ್ತ ಪತಂಜಲನ ಮನೆಯಲ್ಲಿರುತಿದ್ದೆವು. ಅವನ ಹೆಂಡತಿಯ ಮೈಯಲ್ಲಿ ಗಂಧರ್ವನು ಬರುತಿದ್ದನು. ಅವನು ಒಮ್ಮೆ ಪತಂಜಲನನ್ನು ಮತ್ತು ಅಲ್ಲಿರುವ ಯಾಜ್ಞಿಕರನ್ನು, ನೀವು ಈ ಲೋಕದ, ಪರಲೋಕದ ಮತ್ತು ಈ ಎಲ್ಲ ಭೂತಗಳ ಸೂತ್ರವನ್ನು ಬಲ್ಲಿರಾ? ಎಂದು ಕೇಳಿದನು. ಆದಕ್ಕೆ ಆ ಯಾಜ್ಞಿಕರು ಮತ್ತು ಪತಂಜಲನು, ನಮಗೆ ಗೊತ್ತಿಲ್ಲ ಎಂದು ಒಪ್ಪಿಕೊಂಡರು. ಆಗ ಆ ಗಂಧರ್ವನು ಪುನಃ ಸರ್ವಲೋಕಗಳ ಮತ್ತು ಭೂತಗಳ ಅಂತರ್ಯಾಮಿದಲ್ಲಿದ್ದು ಅವುಗಳನ್ನು ಸೂತ್ರಗೊಂಬೆಗಳಂತೆ ನಿಯಮಿಸುವವರಾರು, ಇದನ್ನು ಬಲ್ಲಿರಾ? ಎಂದು ಕೇಳಿದನು. ಅವಕ್ಕೂ ಅವರು, ನಮಗೆ ಗೊತ್ತಿಲ್ಲ, ಎಂದೇ ಉತ್ತರ ಕೊಟ್ಟರು. ಆಗ ಗಂಧರ್ವನು, ಈ ಜ್ಞಾನವನ್ನರಿತವನೆ ಬ್ರಹ್ಮಜ್ಞಾನಿಯು, ಲೋಕಜ್ಞಾನಿಯು, ದೇವಜ್ಞಾನಿಯು, ವೇದಜ್ಞಾನಿಯು, ಭೂತಜ್ಞಾನಿಯು, ಆತ್ಮಜ್ಞಾನಿಯು, ಸರ್ವಜ್ಞಾನಿಯು, ಎಂದು ಆ ಜ್ಞಾನವನ್ನು ನಮಗೆ ಅರುಹಿದನು. ಆ ಗಂಧರ್ವನು

ಹೇಳಿದುದನ್ನು ನಾವು ಬಲ್ಲೆವು. ನೀನು ಆ ಜ್ಞಾನವನ್ನು ಬಲ್ಲೆಯಾದರೆ ಹೇಳು.'

ಇದನ್ನು ಕೇಳಿ ಯಾಜ್ಞವಲ್ಕ್ಯನು ತತ್‌ಕ್ಷಣಕ್ಕೆ, 'ನಾನು ಬಲ್ಲೆನು' ಎಂದು ಹೇಳಿದನು. 'ಹೀಗೆ ನಾ ಬಲ್ಲೆ, ನೀ ಬಲ್ಲೆ, ಎನ್ನುವವರು ಬಹಳ ಜನರು. ನೀನು ಪ್ರತ್ಯಕ್ಷ ಹೇಳಿದಾಗಲೆ ನಿನ್ನ ಮಾತನ್ನು ನಾವು ನಂಬುವೆವು' ಎಂದು ಉದ್ದಾಲಕ ಆರುಣಿಯು ಅವನನ್ನು ಹೀಯಾಳಿಸಿ, ಚುಚ್ಚಿ ಮಾತಾಡಿದನು. ಯಾಜ್ಞವಲ್ಕ್ಯನು ಆ ಉಪರೋಧಿಕ ಭಾಷಣವನ್ನು ಕೇಳಿ ನಕ್ಕನು. ಅವನು ಅಂದದ್ದು, 'ಆರುಣಿಯೇ, ನಾನು ಸುಳ್ಳು ಹೇಳಿ ಸಾಧಿಸುವವನಲ್ಲ. ಆ ವಿದ್ಯೆಯನ್ನು ಹೇಳುವೆನು ಕೇಳಿಕೋ. ವಾಯುವೆ ಈ ಎಲ್ಲ ಲೋಕ, ಪರಲೋಕ ಮತ್ತು ಭೂತಮಾತ್ರ ಇವುಗಳನ್ನು ಬಂಧಿಸುವ ಸೂತ್ರವು, ವಾಯುವು ಹೊರಟು ಹೋದೊಡನೆ ಮನುಷ್ಯನ ಶರೀರವು ಹೆಣವಾಗಿ ನಿಶ್ಚೇಷ್ಟವಾಗಿ ಬಿದ್ದುಹೋಗುವದು. ಅವನ ಅಂಗಾಂಗಗಳೆಲ್ಲ ಶಿಥಿಲವಾಗಿಹೋಗುವವು. ವಾಯುವಿನಿಂದಲೆ ಅವೆಲ್ಲ ಎತ್ತಿಹಿಡಿಯಲ್ಪಟ್ಟಿರುವವು. ಇನ್ನು ಅಂತ-ರ್ಯಾಮಿಯನ್ನು ಕುರಿತು ಹೇಳುವೆನು ಕೇಳು. ಪೃಥಿವಿ, ಅಪ್ಪು, ತೇಜ, ವಾಯು, ಆಕಾಶಾದಿಗಳಲ್ಲಿ, ಸೂರ್ಯ ಚಂದ್ರ ನಕ್ಷತ್ರಾದಿಗಳಲ್ಲಿ, ಪಶುಪಕ್ಷಿ ಮುಂತಾದ ಪ್ರಾಣಿಗಳಲ್ಲಿ ಆಯಾ ಪದಾರ್ಥಗಳಿಗೆ ತಿಳಿಯದೆ ಅವುಗಳನ್ನು ನಿಯಮಿಸುವವನೆ ಅಂತರ್ಯಾಮಿಯು. ಅವನೇ ಆತ್ಮನು. ಅವನು ಅಮೃತನು. ಮನುಷ್ಯನ ಕಣ್ಣು, ಕಿವಿ, ಮೂಗು, ನಾಲಿಗೆ ಮುಂತಾದ ಇಂದ್ರಿಯಗಳಲ್ಲಿ, ಮನಸು, ಪ್ರಾಣಾಪಾನಾದಿಗಳಲ್ಲಿ ಒಳಗೆ ಇದ್ದು ಅವನಿಗೆ ತಿಳಿಯದೆ ಅವುಗಳನೆಲ್ಲ ನಿಯಮಿಸುವವನೆ ಅಂತರ್ಯಾಮಿಯು, ಅವನೇ ಆತ್ಮನು, ಅವನು ಅಮೃತನು. ತಿಳಿದೆಯಾ, ಆರುಣಿಯೇ? ಆ ಅಂತರ್ಯಾಮಿ ಎಂಬವನು ಸ್ವತಃ ಕಾಣಿಸದೆ ಎಲ್ಲ ನೋಡುವನು, ತಾನು ಕೇಳಿಸದೆ ಎಲ್ಲವನ್ನೂ ಕೇಳುವನು, ತಾನು ಯಾರಿಗೂ ತಿಳಿಯದೆ ಎಲ್ಲರನ್ನೂ ಎಲ್ಲವನ್ನೂ ತಿಳಿದುಕೊಳ್ಳುವನು. ಇವನನ್ನುಳಿದು ಇನ್ನಾರೂ ನಿಜವಾದ ನೋಡುವವರಿಲ್ಲ, ಕೇಳುವವರಿಲ್ಲ, ಮಾಡುವವರಿಲ್ಲ, ವಿಚಾರಿಸುವವರಿಲ್ಲ, ಅರಿಯುವವರಿಲ್ಲ. ಇವನೇ ಆತ್ಮನು, ಅಂತರ್ಯಾಮಿಯು, ಅಮೃತನು. ಉಳಿದುದೆಲ್ಲ ವಿನಾ-ಶಿಯು, ಕ್ಷಣಿಕವು, ಭಂಗುರವು.' ಈ ಗುಹ್ಯವಾದ ಆತ್ಮವಿದ್ಯೆಯನ್ನು ಕೇಳಿ ಆರುಣಿಯು ಸ್ವಸ್ಥನಾದನು.

ಒಮ್ಮೆ ಯಾಜ್ಞವಲ್ಕ್ಯನು ಬೆದರಿಸಿದ್ದರೂ ಆದರಿಂದ ಎದೆಗುಂದದೆ

ಗಾರ್ಗಿಯು ಪುನಃ ಎದ್ದು ನಿಂತು ಸಭೆಯಲ್ಲಿಯ ಬ್ರಾಹ್ಮಣರನ್ನೆಲ್ಲ ಉದ್ದೇಶಿಸಿ ಅಂದದ್ದು, 'ಪೂಜ್ಯಬ್ರಾಹ್ಮಣರೇ, ಈಗ ವಾದವು ವ್ಯರ್ಥ ಬೆಳೆಯುತ್ತ ನಡೆದಿದೆ. ಆದುದರಿಂದ ನಾನು ಯಾಜ್ಞವಲ್ಕ್ಯನಿಗೆ ಎರಡು ಮಹತ್ವದ ಪ್ರಶ್ನೆಗಳನ್ನು ಕೇಳುವೆನು. ಅವನು ಅವುಗಳಿಗೆ ಯೋಗ್ಯ ಉತ್ತರಗಳನ್ನು ಕೊಟ್ಟರೆ ಮುಂದೆ ನಿಮ್ಮೊಳಗಿನ ಯಾರೂ ಅವನನ್ನು ಬ್ರಹ್ಮಚರ್ಚೆಯಲ್ಲಿ ಗೆಲ್ಲಲಾರಿರಿ, ಎಂಬುದು ನಿಶ್ಚಯವೆಂದು ತಿಳಿಯಿರಿ.' ಬ್ರಾಹ್ಮಣರೆಲ್ಲರೂ ಈ ಮಾತಿಗೆ ತಲೆದೂಗಿದರು. 'ಒಳ್ಳೇದು, ಆಗಲಿ' ಎಂದು ಅವರು ಗಾರ್ಗಿಗೆ ಅಪ್ಪಣೆಯನ್ನಿತ್ತರು.

ಆಗ ಒಳ್ಳೇ ಧೈರ್ಯಗೊಂಡು ಗಾರ್ಗಿಯು ಯಾಜ್ಞವಲ್ಕ್ಯನಿಗೆ ಅಂದದ್ದು, 'ಹೇ ಯಾಜ್ಞವಲ್ಕ್ಯನೇ, ತೀಕ್ಷ್ಣ ಬಾಣಗಳನ್ನು ಬಿಲ್ಲಿಗೇರಿಸಿದ ಕಾಶಿ ಅಥವಾ ವಿದೇಹದೇಶದ ಕ್ಷಾತ್ರಕುಲದಲ್ಲಿ ಹುಟ್ಟಿದ ವೀರನೋರ್ವನಂತೆ ನಾನು ಎರಡು ಕಠಿಣ ಪ್ರಶ್ನೆಗಳನ್ನು ಸಿದ್ಧಮಾಡಿಕೊಂಡು ನಿನ್ನೆದುರಿಗೆ ನಿಂತಿರುವೆನು. ಆ ಪ್ರಶ್ನೆಗಳ ಸಮರ್ಪಕ ಉತ್ತರಗಳನ್ನು ನೀನು ನನಗೆ ಹೇಳುವಂಥವನಾಗು.'

. ಆ ವಿದುಷಿಯ ವೀರವಾಣಿಯನ್ನು ಕೇಳಿ ಯಾಜ್ಞವಲ್ಕ್ಯನು ಸಂತುಷ್ಟನಾಗಿ ಅಂದದ್ದು, 'ಹೇ ವಿದುಷಿಯೆ, ನಿನ್ನ ಜ್ಞಾನಾವೇಶವನ್ನು ಕಂಡು ನಾನು ಸಂತುಷ್ಟನಾಗಿರುವೆನು. ಕೇಳು, ಕೇಳು. ಎಂತಹ ಬೇಕಾದಂತಹ ಪ್ರಶ್ನೆಗಳನ್ನು ಕೇಳುವಂತಹಳಾಗು, ಗೊತ್ತಿದ್ದಮಟ್ಟಿಗೆ ನಾನು ಉತ್ತರ ಕೊಟ್ಟು ನಿನ್ನನ್ನು ಸಮಾಧಾನಪಡಿಸಲು ಯತ್ನಿಸುವೆನು.'

ಮುನಿಯ ಈ ಮಾತಿನಿಂದ ಉತ್ಸಾಹಗೊಂಡು ಗಾರ್ಗಿಯು ಕೇಳಿದ್ದೇನಂದರೆ, 'ದ್ಯುಲೋಕದಾಚೆಗೂ ಪೃಥ್ವಿಯ ಕೆಳಗೂ ಈ ಎರಡರ ಮಧ್ಯದಲ್ಲಿಯೂ ಯಾವುದು ಭೂತ ವರ್ತಮಾನ ಭವಿಷ್ಯವೆಂದು ತ್ರಿಕಾಲದಲ್ಲಿಯೂ ಇರುವದೊ ಅದು ಯಾತರಿಂದ ವ್ಯಾಪ್ತವು?' ಇದಕ್ಕೆ ಮುನಿಯು ಹೇಳಿದ್ದೇನಂದರೆ, 'ಅದೆಲ್ಲ ಆಕಾಶದಿಂದಲೇ ವ್ಯಾಪ್ತವು.'

ಈ ಯೋಗ್ಯ ಉತ್ತರವನ್ನು ಕೇಳಿ, ಆ ಆಕಾಶವು ಯಾತರಿಂದ ವ್ಯಾಪ್ತವು, ಎಂದು ಗಾರ್ಗಿಯು ಪುನಃ ಕೇಳಿದಳು. ಅದಕ್ಕೆ ಯಾಜ್ಞವಲ್ಕ್ಯನು ಉತ್ತರ ಕೊಟ್ಟದ್ದು, 'ಅಕ್ಷರದಿಂದ ಆಕಾಶವು ವ್ಯಾಪ್ತವು. ಬ್ರಹ್ಮಜ್ಞಾನಿಗಳು ಅದಕ್ಕೆ ಅಕ್ಷರವೆಂದೆ ಹೇಳುವರು. ಅದು ಸ್ಥೂಲವೂ ಇಲ್ಲ ಸೂಕ್ಷ್ಮವೂ ಇಲ್ಲ ಹ್ರಸ್ವವೂ ಇಲ್ಲ ದೀರ್ಘವೂ ಇಲ್ಲ, ಅದರಲ್ಲಿ ಛಾಯೆಯೂ ಇಲ್ಲ ಕತ್ತಲೆಯೂ ಇಲ್ಲ. ಅದು

ಸಂಗರಹಿತವು, ವಾಯುರಹಿತವು, ರಸಗಂಧಸ್ಪರ್ಶಾದಿರಹಿತವು. ಕಣ್ಣು ಕಿವಿ ವಾಣಿ ಮುಂತಾದವುಗಳಿಲ್ಲದ್ದುದು. ಅದಕ್ಕೆ ಒಳಗೆ ಹೊರಗೆಂಬುವುಗಳಿಲ್ಲ. ಆ ಅಕ್ಷರದಿಂದಲೆ ಚಂದ್ರ ಸೂರ್ಯ ತಾರಾಗಣ ಮುಂತಾದವುಗಳು ಧರಿಸಲ್ಪಟ್ಟಿರುವವು. ಅದರಿಂದಲೆ ಅವೆಲ್ಲ ನಿಯಮಿಸಲ್ಪಟ್ಟಿರುವವು. ದಿನ ರಾತ್ರಿ, ಪಕ್ಷ ಮಾಸ, ಋತು ವರ್ಷ ಮುಂತಾದವುಗಳೆಲ್ಲ ಅದರ ಆಧಾರದಿಂದಲೆ ಸಂಭವಿಸುವವು. ದಿಕ್ಕುದಿಕ್ಕಿಗೆ ಹರಿಯುವ ನದೀಪ್ರವಾಹಗಳೆಲ್ಲ ಅದರಿಂದಲೆ ನಿಯಮಿಸಲ್ಪಟ್ಟಿರುವವು. ಆ ಅಕ್ಷರದ ನಿಯಮದ ಮೂಲಕವೆ ಎಲ್ಲವೂ ನಿಯಮಬದ್ಧವಾಗಿ ನಡೆಯುವದು, ಎಲ್ಲರೂ ನಿಯಮಬದ್ಧರಾಗಿ ನಡೆಯುವರು. ಹೇ ಗಾರ್ಗಿ, ಈ ಅಕ್ಷರದ ಜ್ಞಾನವಿಲ್ಲದೆ ಹೋಮಿಸುವವರ, ಯಜ್ಞಗಳನ್ನು ಮಾಡುವವರ, ಸಾವಿರಾರು ವರ್ಷ ತಪಸ್ಸು ಮಾಡುವವರ ಕರ್ಮಫಲವು ವಿನಾಶಿಯು. ಈ ಅಕ್ಷರದ ಜ್ಞಾನವಿಲ್ಲದೆ ಮರಣಹೊಂದುವವರು ಕ್ಷುಲ್ಲಕರು, ಹೀನರು, ದೀನರು. ಈ ಅಕ್ಷರದ ಜ್ಞಾನವನ್ನು ಪಡೆದ ಬಳಿಕ ಮರಣಹೊಂದುವವರು ನಿಜವಾದ ಬ್ರಹ್ಮಜ್ಞಾನಿಗಳು. ಈ ಅಕ್ಷರವು ತಾನು ಕಾಣದೆ ಕೇಳಿಸದೆ ಎಲ್ಲವನ್ನೂ ಕಾಣುವದು, ಕೇಳುವದು. ತಾನು ಅನ್ಯರ ವಿಚಾರವಿಷಯವಾಗದೆ ಎಲ್ಲವನ್ನು ವಿಚಾರಿಸುವದು. ಅದನ್ನುಳಿದು ಈ ವಿಶ್ವದಲ್ಲಿ ಯಾರೂ ಕೇಳುವವರಿಲ್ಲ, ನೋಡುವವರಿಲ್ಲ, ಅರಿತುಕೊಳ್ಳುವವರಿಲ್ಲ, ಏನನ್ನೂ ಮಾಡುವವರಿಲ್ಲ. ಹೇ ಗಾರ್ಗಿಯೇ, ಈ ಅಕ್ಷರದಿಂದ, ಈ ಆತ್ಮವಸ್ತುವಿನಿಂದ ಆಕಾಶವೆಂಬುದು ವ್ಯಾಪ್ತವು.'

ಈ ಅಕ್ಷರದ ಜ್ಞಾನವನ್ನು ಕೇಳಿ ಯಾಜ್ಞವಲ್ಕ್ಯನಿಗೆ ನಮಸ್ಕಾರಮಾಡಿ ಗಾರ್ಗಿಯು ಎಲ್ಲ ಬ್ರಾಹ್ಮಣಸಮಾಜಕ್ಕೆ ಅಂದದ್ದು, 'ಬ್ರಾಹ್ಮಣವರ್ಯರೇ, ನೀವು ಈ ಯಾಜ್ಞವಲ್ಕ್ಯನನ್ನು ಸೋಲಿಸಲಾರಿರಿ. ಬ್ರಹ್ಮವಿದ್ಯೆಯಲ್ಲಿ ಇವನನ್ನು ಗೆಲ್ಲುವವರನ್ನು ನಾನಂತೂ ಕಾಣೆ.' ಹೀಗೆ ಅಂದು ಗಾರ್ಗಿಯು ತನ್ನ ಸ್ಥಾನದಲ್ಲಿ ಸ್ವಸ್ಥ ಕುಳಿತಳು.

ಇಲ್ಲಿಗೆ ವಾದವು ಮುಗಿಯಬೇಕಿತ್ತು. ಆದರೆ ಮತ್ತೆ ವಿದಗ್ಧ ಶಾಕಲ್ಯನೆಂಬವನು ಹಲವು ಪ್ರಶ್ನೆಗಳನ್ನೆತ್ತಿದನು. ದೇವತೆಗಳು ಎಷ್ಟು, ಎಂಬುದೆ ಅವನ ಪ್ರಶ್ನೆಯು. ಬೇರೆ ಬೇರೆ ವೇದ ಮಂತ್ರಗಳಲ್ಲಿ ಹೇಳಿರುವಂತೆ ಮೂವತ್ತು ಮೂರು, ಆರು, ಮೂರು ಎಂದು ಮುಂತಾಗಿ ಹೇಳಿ ಕೊನೆಗೆ ಒಬ್ಬನೇ ದೇವರು, ಪ್ರಾಣವೇ ಆ ದೇವರು, ಎಂದು ಯಾಜ್ಞವಲ್ಕ್ಯನು ಹೇಳಿದನು. ಮುಂದೆ

ಅನೇಕ ಪ್ರಶ್ನೋತ್ತರಗಳು ನಡೆಯಲು ಮುನಿಯು ಶಾಕಲ್ಯನಿಗೆ ಅಂದದ್ದೇನಂದರೆ, 'ಹೇ ಶಾಕಲ್ಯನೇ, ಈ ಬ್ರಾಹ್ಮಣರೆಲ್ಲರೂ ನಿನ್ನನ್ನು ಕೇವಲ ಕೆಂಡ ಹಿಡಿಯುವ ಇಕ್ಕಳದಂತೆ ಉಪಯೋಗಿಸುತಿರುವರು, ಎಚ್ಚರದಿಂದಿರು.'

ಇದನ್ನು ಕೇಳಿ ಅವನು ಸ್ವಲ್ಪ ಸಿಟ್ಟಿಗೆದ್ದು, 'ಮುನಿವರ್ಯನೇ, ನೀನೇನು ದೊಡ್ಡ ಬ್ರಹ್ಮಜ್ಞಾನಿಯೆಂದು ಕುರುಪಾಂಚಾಲದೇಶದ ಬ್ರಾಹ್ಮಣರನುದ್ದೇಶಿಸಿ ಈ ಬಗೆಯ ಮಾತುಗಳನ್ನಾಡುವೆಯಾ? ಹೀಗೆ ನೀನು ಅನ್ನುವದು ಅವರಿಗೆ ಅಪಮಾನಕಾರಕವಲ್ಲವೆ?' ಎಂದನು. ಆಗ ಮತ್ತೆ ದಿಕ್ಕುಗಳ ಬಗ್ಗೆ ಮತ್ತು ಅಲ್ಲಿ ಅಧಿಷ್ಠಿತವಿರುವ ದೇವತೆಗಳ ಬಗ್ಗೆ ಪ್ರಶ್ನೋತ್ತರಗಳು ನಡೆದವು. 'ಪ್ರಾಣಾಪಾನಾದಿಗಳೆಲ್ಲ ಆತ್ಮನಲ್ಲಿ ಪ್ರತಿಷ್ಠಿತವಿರುವವು. ಆ ಆತ್ಮನನ್ನು ನೇತಿ ನೇತಿ—ಇದಲ್ಲ ಇದಲ್ಲ, ಈ ಗೋಚರವಾದದು ಆವುದೂ ಅಲ್ಲ—ಎಂದು ವರ್ಣಿಸುವರು. ಅವನು ಅಗ್ರಾಹ್ಯನು, ಅವಿನಾಶಿಯು, ಅಸಂಗನು, ಅಬದ್ಧನು, ಅವ್ಯಥಿತನು, ಅಹಿಂಸಿತನು' ಹೀಗೆ ಆತ್ಮಸ್ವರೂಪವನ್ನು ವರ್ಣಿಸಿ ಯಾಜ್ಞವಲ್ಕ್ಯನು ಶಾಕಲ್ಯನಿಗೆ, 'ಅಷ್ಟ ಆಯತನಗಳು, ಅಷ್ಟಲೋಕಗಳು, ಅಷ್ಟ ದೇವತೆಗಳು, ಈ ಎಲ್ಲವುಗಳ ನಿಶ್ಚಿತ ಜ್ಞಾನಮಾಡಿಕೊಂಡು, ಹೃದಯದಲ್ಲಿ ಇವೆಲ್ಲವುಗಳ ಉಪಸಂಹಾರ ಮಾಡಿ ಯಾವ ಪುರುಷನು ಎಲ್ಲ ಉಪಾಧಿಗಳಾಚೆಗೆ ಹೋಗಬಲ್ಲನೊ ಆ ಪುರುಷನು ಯಾರು ಎಂಬುದನ್ನು ನೀನು ಅರಿತಿರುವೆಯಾ? ಆ ಪುರುಷನನ್ನು ಕುರಿತು ನೀನು ಹೇಳದೆ ಹೋದರೆ ನಿನ್ನ ತಲೆ ಕತ್ತರಿಸಿ ಬೀಳುವದು' ಎಂದು ಆಹ್ವಾನಕೊಟ್ಟನು. ಪಾಪ, ಶಾಕಲ್ಯನಿಗೆ ಮುನಿಯು ಕೇಳಿದ ಪ್ರಶ್ನೆಯ ಉತ್ತರವು ಗೊತ್ತಿರಲಿಲ್ಲ. ಆದುದರಿಂದ ಆ ಕ್ಷಣವೆ ಅವನು ಅಲ್ಲಿ ಮೃತವತ್ ಬಿದ್ದನು ಮತ್ತು ಅವನ ತಲೆ ಕತ್ತರಿಸಿ ಕಡೆಗಾಯಿತು.

ಇಷ್ಟಾದ ಬಳಿಕ ಯಾಜ್ಞವಲ್ಕ್ಯನು ಉಳಿದ ಬ್ರಾಹ್ಮಣರಿಗೆ ಅಂದದ್ದು, 'ಬ್ರಾಹ್ಮಣಶ್ರೇಷ್ಠರೇ, ನಿಮ್ಮಲ್ಲಿ ಯಾರಾದರೂ ಪ್ರಶ್ನೆಗಳನ್ನು ಕೇಳಬೇಕಾಗಿದ್ದರೆ ಕೇಳಿರಿ. ಅಥವಾ ನಾನು ಪ್ರಶ್ನೆಗಳನ್ನು ಕೇಳಬೇಕೆಂದಿದ್ದರೆ ಹಾಗೆ ಮಾಡುವೆನು. ನಿಮ್ಮಿಚ್ಛೆ.' ಆದರೆ ಈ ಆಹ್ವಾನಕ್ಕೆ ಒಬ್ಬ ಬ್ರಾಹ್ಮಣನೂ ಪಿಟ್ಟೆಂದು ಬಾಯಿ ಬಿಚ್ಚಲಿಲ್ಲ. ಶಾಕಲ್ಯನ ಸ್ಥಿತಿಯನ್ನು ನೋಡಿ ಅವರೆಲ್ಲರೂ ಬೆಪ್ಪಾಗಿ ಕುಳಿತಿದ್ದರು. ಆಗ ಮತ್ತೆ ಯಾಜ್ಞವಲ್ಕ್ಯನು ಅಂದದ್ದು, 'ಎದುರಿಗೆ ಕಾಣುವ ವೃಕ್ಷವು ಎಷ್ಟು ಸತ್ಯವಿರುವದೋ ಅಷ್ಟೇ ಪುರುಷನೂ ಸತ್ಯನಿರು

ವನು. ಶರೀರ ಮನ ಆದಿಗಳೆಲ್ಲ ಅವನ ಆವರಣಗಳಿದ್ದಂತೆ. ಶರೀರಾದಿಗಳು ಸತ್ತಬಳಿಕ ಸಹ ಆ ಪುರುಷನು ಇರುವನು. ವಿಜ್ಞಾನಮಯ ಆನಂದಬ್ರಹ್ಮವೆ ಅವನ ಆಯತನವು. ಅದೇ ಎಲ್ಲ ವಸ್ತುಗಳ ಆಯತನವು. ಅದೇ ಎಲ್ಲರ ಆಶ್ರಯವು, ವಿಶ್ರಾಮಸ್ಥಾನವು, ಪರಂಧಾಮವು. ಕರ್ಮಫಲಗಳನ್ನು ಕೊಡುವ ಶಕ್ತಿಯು ಅದೇ. ನಿಷ್ಕಾಮ ಜ್ಞಾನಿಯ ಪರಾಯಣವಾದರೂ ಅದೇ ಬ್ರಹ್ಮವಸ್ತುವು. ಅವನಿಂದಲೆ ಎಲ್ಲವೂ ಹುಟ್ಟುವದು, ಅವನಲ್ಲಿಯೆ ಎಲ್ಲವೂ ಲಯಹೊಂದುವದು.'

ಈ ಮೇರೆಗೆ ಮುನಿಯು ಹೇಳಿದ ಬ್ರಹ್ಮಜ್ಞಾನವನ್ನು ಎಲ್ಲ ಬ್ರಾಹ್ಮಣರು ಕೇಳಿ ಸಂತೃಪ್ತರಾದರು. ಯಾಜ್ಞವಲ್ಕ್ಯನೆ ಎಲ್ಲರಲ್ಲಿ ಶ್ರೇಷ್ಠನು, ಅವನೇ ಬ್ರಹ್ಮವೇತ್ತನು, ಎಲ್ಲರಿಗಿಂತ ಹೆಚ್ಚಿನ ಬ್ರಹ್ಮಿಷ್ಠನು, ಎಂಬುದನ್ನು ಎಲ್ಲರೂ ಒಪ್ಪಿದರು. ಆಗ ಜನಕರಾಜನು ತಲೆದೂಗಿ, ಯಾಜ್ಞವಲ್ಕ್ಯನು ಗೋವುಗಳನ್ನು ತನ್ನ ಆಶ್ರಮಕ್ಕೆ ಸಾಗಿಸಿದ್ದು ಯಥಾಯೋಗ್ಯವೆ ಎಂದು ತಿಳಿದು, ಅವನನ್ನು ಹತ್ತಿರ ಕರೆದು ಚನ್ನಾಗಿ ಸನ್ಮಾನಿಸಿದನು. ಆ ಬಳಿಕ ಯಜ್ಞಕಾರ್ಯಗಳೆಲ್ಲ ಸುಸೂತ್ರ ಸಾಗಿ ಎಲ್ಲರೂ ತಮ್ಮ ತಮ್ಮ ಸ್ಥಳಗಳಿಗೆ ಹೋಗಿ ಮುನಿಯು ಹೇಳಿದ ಬ್ರಹ್ಮನ ಚಿಂತನೆಯಲ್ಲಿ ಕಾಲ ಕಳೆಯುವಂಥವರಾದರು.

## ೧೯. ಅಮೃತ ಆತ್ಮ

ಒಮ್ಮೆ ಯಾಜ್ಞವಲ್ಕ್ಯಮುನಿಯು ಜನಕನ ಓಲಗಕ್ಕೆ ಹೋದನು. ಆಗ ಜನಕರಾಜನು, 'ಹೇ ಮುನಿವರ್ಯನೇ, ನೀನು ನನ್ನ ಬಳಿಗೆ ಗೋವುಗಳ ಇಚ್ಛೆಯಿಂದ ಬಂದಿರುವಿಯೋ ಅಥವಾ ನಾನು ನಿನಗೆ ಸೂಕ್ಷ್ಮ ಪ್ರಶ್ನೆಗಳನ್ನು ಕೇಳಬೇಕೆಂದು ಬಂದಿರುವಿಯೋ?' ಎಂದು ಕೇಳಿದನು. ಆಗ ನಗುತ್ತ ಮುನಿಯು, 'ರಾಜಶ್ರೇಷ್ಠನೇ, ಎರಡೂ ಸೈ. ಆದರೆ ನೀನು ಪ್ರಶ್ನೆಯನ್ನು ಕೇಳುವದಕ್ಕಿಂತ ಮುನ್ನ ನಾನು ನಿನಗೆ ಪ್ರಶ್ನೆಯನ್ನು ಕೇಳುವೆನು. ಹೇ ಸಮ್ರಾಟನೇ, ದೂರದೇಶಕ್ಕೆ ಹೋಗಲನುವಾದವನು ರಥವನ್ನಾಗಲಿ ನಾವೆಯನ್ನಾಗಲಿ ಆಶ್ರಯಿಸುವಂತೆ ನೀನು ಜ್ಞಾನವನ್ನಾಶ್ರಯಿಸಿ ಉಪನಿಷದಭ್ಯಾಸ

ಮಾಡಿ ಶಾಂತಚಿತ್ತನಾಗಿರುವಿ. ಇದಲ್ಲದೆ ನೀನು ಪೂಜ್ಯನು, ಸಿರಿವಂತನು, ವೇದಗಳನ್ನೋದಿದವನು, ಉಪನಿಷದುಕ್ತ ಉಪಾಸನೆಯನ್ನು ಮಾಡಿದವನು. ನಾನು ಕೇಳುವ ಪ್ರಶ್ನೆಯ ಉತ್ತರವು ನಿನಗೆ ಗೊತ್ತಿರಲಿಕ್ಕೆ ಸಾಕು. ಇಲ್ಲಿಂದ ತೆರಳಿದ ಬಳಿಕ ಅಂದರೆ ಮರಣಪಶ್ಚಾತ್ ನೀನು ಎಲ್ಲಿ ಹೋಗುವಿ ಇದನ್ನು ಬಲ್ಲೆಯಾ ?' ಎಂಬ ಪ್ರಶ್ನೆ ಮಾಡಿದನು. 'ನಾನರಿಯೆ ಸ್ವಾಮೀ' ಎಂದು ಜನಕನು ವಿನಯಪುರಸ್ಸರವಾಗಿ ಉತ್ತರ ಕೊಟ್ಟನು.

ಆಗ ಮುನಿಯು ಅಂದದ್ದು, 'ನಿನ್ನಲ್ಲಿರುವ ಸೂಕ್ಷ್ಮಾತ್ಮನೆ ಮುಖ್ಯನು. ಶರೀರಪಾತದ ನಂತರ ಅವನೇ ಉಳಿಯುವನು. ಅವನು ಯಾರಿಂದಲೂ ಗ್ರಹಿಸಲ್ಪಡಲಾರನು, ಆದುದರಿಂದ ಅವನು ಅಗ್ರಾಹ್ಯನು. ಅವನು ಯಾರಿಂದಲೂ ನಾಶಹೊಂದನು, ಆದುದರಿಂದ ಅವನು ಅಶೀರ್ಯನು. ಅವನು ಸಂಗರಹಿತನು, ವ್ಯಥಾರಹಿತನು, ಹಿಂಸಾರಹಿತನು. ಈ ಜ್ಞಾನವನ್ನು ಪಡೆದವನಾಗಿ ಹೇ ರಾಜನ್, ನೀನು ಅಭಯಪದವನ್ನು ಪಡೆಯುವಿ. ಮರಣಪಶ್ಚಾತ್ ನೀನು ಪುಣ್ಯದಿಂದ ಪುಣ್ಯಲೋಕಕ್ಕೆ ಪಾಪದಿಂದ ಪಾಪಲೋಕಕ್ಕೆ, ನಿಷ್ಕಾಮಜ್ಞಾನದಿಂದ ಬ್ರಹ್ಮಲೋಕಕ್ಕೆ ತೆರಳುವಿ.'

ಇದನ್ನು ಕೇಳಿ ಆನಂದಿತನಾಗಿ, 'ಒಂದು ಸಹಸ್ರ ಆಕಳುಗಳನ್ನು ಕೊಡುವೆನು. ಮುನಿಶ್ರೇಷ್ಠನೇ, ಆ ಪುರುಷನು ಯಾವ ಜ್ಯೋತಿಯ ಸಹಾಯದಿಂದ ಕರ್ಮಮಾಡುವನು ಇದನ್ನು ಹೇಳುವಂಥವನಾಗು' ಎಂದು ಮುನಿಯನ್ನು ಬೇಡಿಕೊಂಡನು. ಆಗ ಮುನಿಯು, 'ಸೂರ್ಯನ ಸಹಾಯದಿಂದ, ಸೂರ್ಯ ನಿಲ್ಲದಾಗ ಚಂದ್ರನ ಸಹಾಯದಿಂದ, ಚಂದ್ರನಿಲ್ಲದಾಗ ಅಗ್ನಿಯ ಸಹಾಯದಿಂದ' ಎಂದು ಕ್ರಮವಾಗಿ ಹೇಳುತ್ತ ಹೇಳುತ್ತ ಕೊನೆಗೆ, 'ಆತ್ಮನೆ ಪುರುಷನ ಮುಖ್ಯ ಜ್ಯೋತಿಯು, ಅವನ ಸಹಾಯದಿಂದಲೆ ಪುರುಷನು ಕರ್ಮಮಾಡಬಲ್ಲನು' ಎಂದು ಹೇಳಿದನು.

ಇದನ್ನು ಕೇಳಿ ಜನಕರಾಜನು ಪುನಃ 'ಮುನಿರಾಜನೇ, ನಾನು ಒಂದು ಸಾವಿರ ಆಕಳುಗಳನ್ನು ನಿನಗೆ ಅರ್ಪಣ ಮಾಡಿರುವೆನು. ಈಗ ಆ ಆತ್ಮನು ಯಾರು ಎಂಬುದನ್ನು ನನಗೆ ತಿಳಿಹೇಳು' ಎಂದು ಪ್ರಾರ್ಥಿಸಿದನು. 'ವಿಜ್ಞಾನಮಯನೂ ಅಂದರೆ ಶುದ್ಧ ಚಿನ್ಮಯನೂ ಎಲ್ಲ ಪ್ರಾಣಿಗಳ ಹೃದಯಾಂತರದಲ್ಲಿ ಜ್ಯೋತಿರೂಪನಾಗಿ ಇರುವವನೂ ಆತ್ಮನೆಂದು ತಿಳಿ. ಆಯಾ ಭೂಮಿಕೆಗೆ ಹೇಗೆ ಬೇಕೋ ಹಾಗೆ ಅವನು ಆಯಾ ರೂಪಗಳನ್ನು ಧರಿಸಿ ಇಹಪರ

ಗಳಲ್ಲಿ ಸಂಚರಿಸುವನು. ಸ್ವಪ್ನಸೃಷ್ಟಿಯಲ್ಲಿರುವಾಗ, ಮೃತ್ಯುಲೋಕದ ರೂಪಗಳಾಚೆಗೆ ಹೋಗುವನು. ಅದೇ ಆತ್ಮನು ಹುಟ್ಟುವಾಗ ಇಂದ್ರಿಯಗಳಿಂದ ಯುಕ್ತನಾಗುವನು, ಸಾಯುವಾಗ ಅವುಗಳನೆಲ್ಲ ಬಿಟ್ಟು ಹೋಗುವನು. ಅವನ ಮುಖ್ಯ ಸ್ಥಾನಗಳು ಎರಡು, ಇಹ ಮತ್ತು ಪರ ಅಥವಾ ಜಾಗ್ರತ್ ಮತ್ತು ಸುಷುಪ್ತ ಅಥವಾ ಬಾಹ್ಯ ಮತ್ತು ಅಂತರ. ಮೂರನೆಯ ಸ್ಥಾನವು ಸ್ವಪ್ನವೆಂಬುವದು. ಅದು ಸಂಧಿಸ್ಥಾನವೆಂದು ಹೇಳಬಹುದು. ಅವನು ಇಹಲೋಕ ಪರಲೋಕಗಳಲ್ಲಿ ಸಂಚರಿಸುವ ಕ್ರಮದಿಂದಲೆ ಪುಣ್ಯಪಾಪಗಳ ಫಲಗಳನ್ನಾದರೂ ಭೋಗಿಸುವನು. ಅವನು ಮಲಗುವಾಗ ಈ ವಿಷಯಮಯ ಜಗತ್ತನ್ನು ಬಿಟ್ಟು ವಾಸನಾಮಯ ದೇಹವನ್ನು ನಿರ್ಮಿಸಿ ತನ್ನ ಬೆಳಕಿನಿಂದ ಒಡಗೂಡಿ ಮಲಗುವನು. ಆ ಅವಸ್ಥೆಯಲ್ಲಿ ಪುರುಷನು ಸ್ವಯಂಜ್ಯೋತಿಯಿರುವನು. ಆ ಸ್ವಪ್ನ ಸ್ಥಿತಿಯಲ್ಲಿ ರಥವಾಗಲಿ, ಕುದುರೆಗಳಾಗಲಿ, ಬೀದಿಗಳಾಗಲಿ ಇರುವದಿಲ್ಲ. ಅವೆಲ್ಲವುಗಳನ್ನು ಅವನೇ ತನ್ನ ಜ್ಯೋತಿಯಿಂದ ನಿರ್ಮಿಸುವನು. ಆನಂದ, ಮೋದ, ಪ್ರಮೋದಗಳೂ ಅಲ್ಲಿರುವದಿಲ್ಲ. ಅವುಗಳನ್ನೂ ಅವನೇ ನಿರ್ಮಿಸುವನು. ಅಲ್ಲಿ ಕೆರೆ, ಹೊಂಡ, ಹೊಳೆಗಳೂ ಇರುವದಿಲ್ಲ. ಅವುಗಳನ್ನಾದರೂ ಅವನೇ ನಿರ್ಮಿಸುವನು. ಆ ಬಳಿಕ ಸ್ವಪ್ನಸ್ಥಾನವನ್ನು ಬಿಟ್ಟು ಅವನು ಪುನಃ ಸ್ಥೂಲ ಇಂದ್ರಿಯರೂಪಗಳನ್ನು ತಾಳಿ ಜಾಗ್ರತಸ್ಥಾನಕ್ಕೆ ಬರುವನು. ಚಿನ್ಮಯ ಪುರುಷನು ಒಬ್ಬನೇ ಇದ್ದು ಅವನು ಹೀಗೆ ಜಾಗ್ರತ್, ಸ್ವಪ್ನ, ಸುಷುಪ್ತ ಸ್ಥಾನಗಳಲ್ಲಿ ವಿಹರಿಸುವನು.

'ಮಹಾರಾಜನೇ, ಜಾಗ್ರತಸ್ಥಾನದಲ್ಲಿ ಸೂರ್ಯಚಂದ್ರಾದಿಗಳ ಬೆಳಕಿನಿಂದ ನೋಡುವ ಎಲ್ಲ ವಸ್ತುಗಳನ್ನು ಸ್ವಪ್ನಸ್ಥಾನದಲ್ಲಿ ಆತ್ಮನು ಸ್ವಪ್ರಕಾಶದಿಂದ ನೋಡುವನು. ಆ ಆತ್ಮನು ಸಂಪ್ರಸಾದ ಸ್ಥಿತಿಯಲ್ಲಿ ಅಂದರೆ ಸುಷುಪ್ತಿಯಲ್ಲಿ ರಮಿಸಿ ವಿಹಾರಮಾಡಿ, ಪಾಪಪುಣ್ಯಗಳನ್ನು ಕೇವಲ ಸಾಕ್ಷಿಯಂತೆ ನೋಡಿ, ಹೋದ ಮಾರ್ಗದಿಂದ ಪುನಃ ಸ್ವಪ್ನಸ್ಥಾನಕ್ಕೆ ಬರುವನು. ತಾನು ಏನು ನೋಡಿರುವನೊ ಅದರಿಂದ ಅವನು ಅಬದ್ಧನು, ಯಾಕಂದರೆ ಅವನು ಅವುಗಳಿಂದ ಅಲಿಪ್ತನು, ಅಸಂಗನು, ಅನಾಸಕ್ತನು. ಆತ್ಮನು ಸ್ವಪ್ನಸ್ಥಿತಿಯಲ್ಲಿಯೂ ರಮಿಸಿ ವಿಹಾರಮಾಡಿ ಪುಣ್ಯಪಾಪಗಳ ಫಲಗಳನ್ನು ನೋಡಿ ಪುನಃ ಹೋದ ಮಾರ್ಗದಿಂದ ಜಾಗ್ರತಸ್ಥಾನಕ್ಕೆ ಬರುವನು. ಸ್ವಪ್ನಸ್ಥಾನದಲ್ಲಿ ನೋಡಿದ ಪುಣ್ಯಪಾಪಗಳಿಂದ ಅವನು ಅಬದ್ಧನು, ಯಾಕಂದರೆ ಅವನು

ಅಸಂಗನು ಮತ್ತು ಅನಾಸಕ್ತನು. ಅದೇ ರೀತಿ ಅವನು ಜಾಗ್ರತಸ್ಥಾನ ದಲ್ಲಿಯೂ ರಮಿಸಿ, ವಿಹಾರಮಾಡಿ, ಆಸಕ್ತನೇ ಇರಬಲ್ಲನು. ಹಾಗೆ ಇದ್ದರೆ ಅವನು ಬದ್ಧನಾಗನು. ಒಂದು ದೊಡ್ಡ ಮೀನವು ನದಿಯ ಆ ದಂಡೆಯಿಂದ ಈ ದಂಡೆಗೆ ವಿಹರಿಸುವಂತೆ, ಅಥವಾ ಆಕಾಶದಲ್ಲಿ ಒಂದು ಗಿಡಗವು ಇಲ್ಲವೆ ಗರುಡಪಕ್ಷಿಯು ಅತ್ತಿತ್ತ ವಿಹರಿಸಿ ತನ್ನ ಗೂಡನ್ನು ಸೇರುವಂತೆ ಪುರುಷನು ಜಾಗ್ರತ ಸ್ವಪ್ನಸ್ಥಿತಿಗಳಲ್ಲಿ ವಿಹರಿಸಿ ತನ್ನ ವಿಶ್ರಾಮಸ್ಥಾನವಾದ ಸುಷುಪ್ತಸ್ಥಿತಿ ಯನ್ನು ಸೇರುವನು. ಆ ಸ್ಥಿತಿಯಲ್ಲಿ ಅವನು ಸ್ವಪ್ನರಹಿತನೂ ಶಾಂತನೂ ಕಾಮರಹಿತನೂ ಇರುವನು.'

ಇದನ್ನು ಕೇಳಿ, 'ಮುನಿಮಹಾರಾಜನೇ, ನಿನಗೆ ಮತ್ತೆ ಒಂದು ಸಾವಿರ ಆಕಳುಗಳನ್ನು ಸಮರ್ಪಿಸಿರುವೆನು. ನನಗೆ ಪೂರ್ಣ ಜ್ಞಾನವನ್ನು ಹೇಳು ವಂಥವನಾಗು. ಆತ್ಮನು ಅಲಿಪ್ತನೂ ಅಬದ್ಧನೂ ಇದ್ದರೂ ಸ್ವಪ್ನದಲ್ಲಿ ತನಗೆ ಹೊಡೆದಂತೆ, ತನ್ನನ್ನು ಒಡಿದಂತೆ, ತಾನು ತೆಗ್ಗಿನಲ್ಲಿ ಬಿದ್ದಂತೆ ಏಕೆ ಅನುಭವ ವಾಗುವದು?' ಎಂದು ಜನಕನು ಕೇಳಿದನು. ಆಗ ಮುನಿಯು ಅಂದದ್ದು, 'ಪ್ರಿಯ ರಾಜನೇ, ಆತ್ಮನು ಅಲಿಪ್ತನೂ ಅಸಕ್ತನೂ ಇದ್ದರೂ ಅವನಿಗೆ ನೀನು ಹೇಳಿದಂತೆ ಅನುಭವಗಳಾಗುವದು ನಿಜವು. ಎಚ್ಚರಿರುವಾಗ ಯಾವ ಭಯಶೋಕಾದಿಗಳು ಅವನಿಗೆ ಉಂಟಾಗುವವೊ ಅವೇ ಅವನಿಗೆ ಸ್ವಪ್ನ ದಲ್ಲಿಯೂ ಬೆನ್ನು ಬಿಡವು. ಹೀಗೆ ಆಗುವ ಕಾರಣವೆಂದರೆ ತನ್ನ ನಿಜಸ್ವರೂಪದ ಬಗ್ಗೆ ಆತ್ಮನಿಗೆ ಇದ್ದ ಮೋಹವು. ಅದು ಹೋಗಿ ನಾನೇ ಆತ್ಮನು, ನಾನೇ ಅರಸನು, ದೇವನು, ಅಭಯನು ಎಂಬ ಯಥಾರ್ಥ ಜ್ಞಾನವು ಅಳವಟ್ಟಿತೆಂದರೆ ಭಯಶೋಕಾದಿಗಳೆಲ್ಲ ಮಂಜಿನಂತೆ ಮಾಯವಾಗುವವು. ಅಲ್ಲಿಯವರೆಗೆ ಇವು ಬಿಡಲಾರವು. ಹೀಗೆ ಅರಿಯುವದೆ ಪರಮಲೋಕವು, ಪರಮಸ್ಥಿತಿಯು. ಇದೇ ಆತ್ಮನ ನಿಷ್ಕಾಮ, ನಿಷ್ಪಾಪ, ನಿರ್ಭಯ ಸ್ಥಿತಿಯು ತನ್ನ ಪ್ರಿಯ ಸತಿ ಯನ್ನು ಆಲಿಂಗಿಸಿದಾಗ ಪುರುಷನು ಅಂತರ್ಬಾಹ್ಯ ಪ್ರಜ್ಞಾಶೂನ್ಯ ಆನಂದ ಸ್ಥಿತಿಯಲ್ಲಿರುವಂತೆ ಪ್ರಾಜ್ಞ ಆತ್ಮನೊಡಗೂಡಿದಾಗ ಒಳ ಹೊರಗಿನ ಯಾವ ಪ್ರಜ್ಞೆಯೂ ಇಲ್ಲದೆ ಆನಂದಮಗ್ನನಾಗುವದೆ ಆತ್ಮನ ಪರಮಸ್ಥಿತಿಯು. ಇದೇ ಆ ಪುರುಷನ ಆಪ್ತಕಾಮ, ಅಕಾಮ, ಶೋಕರಹಿತ ರೂಪವು. ಆ ಸ್ಥಿತಿಯಲ್ಲಿ ನೋಡುವ, ಕೇಳುವ, ಮಾತಾಡುವ, ಮುಂತಾದ ಸಾಮರ್ಥ್ಯಗಳೆಲ್ಲ ಇದ್ದರೂ ಆತನು ನೋಡುವದಿಲ್ಲ, ಕೇಳುವದಿಲ್ಲ, ಮಾತಾಡುವದಿಲ್ಲ. ಯಾಕಂದರೆ ಆ

ಸ್ಥಿತಿ ಒಂದೇ ಒಂದು ಇರುವದರಿಂದ ಯಾರು ಯಾರನ್ನು ಯಾತರಿಂದ ಮಾತಾಡಿಸಬೇಕು ? ನೀರು ಎಲ್ಲೆಲ್ಲಿಯೂ ಒಂದೇ ಒಂದು ಇದ್ದಂತೆ ಆತ್ಮನು ಸುಷುಪ್ತಿಯಲ್ಲಿ ಏಕರಸ ಅದ್ವೈತನಿರುವನು. ಹೇ ಸಮ್ರಾಟ್ ಜನಕನೇ, ಅದೇ ಬ್ರಹ್ಮಲೋಕವು, ಅದೇ ಪರಮಗತಿಯು, ಅದೇ ಪುರುಷನ ಪರಮ ಸಂಪತ್ತು, ಅದೇ ಪರಮ ಆನಂದವು. ಆ ಆನಂದದ ಅಂಶಮಾತ್ರದಿಂದ ಮಿಕ್ಕ ಜೀವಗಳೆಲ್ಲ ಜೀವಿಸುವವು.'

ಜನಕರಾಯನು ಇಷ್ಟರಿಂದ ಸಂತುಷ್ಟನಾಗದೆ ಮುಂದಿನ ಜ್ಞಾನವನ್ನು ಹೇಳು, ಎಂದು ಮುನಿಯನ್ನು ಕೇಳಿಕೊಂಡನು. ಆಗ ಮುನಿಯು ಅಂದದ್ದು, 'ದೇಹದಲ್ಲಿರುವಾಗ ಪುರುಷನು ಜಾಗ್ರತ್ ಸ್ವಪ್ನ ಸುಷುಪ್ತ ಸ್ಥಿತಿಗಳಲ್ಲಿ ವಿಹರಿಸುವಂತೆ ದೇಹಪಾತವಾಗುವ ಸಮಯದಲ್ಲಿ ಆ ಪುರುಷನ ಪ್ರಾಣಗಳೆಲ್ಲ ಆತ್ಮನೊಡನೆ ಹೊರಡಲು ಸಿದ್ಧವಾಗುವವು. ಜಲಾಯುಕ ಹುಳವು ಒಂದು ಕಡ್ಡಿಯಿಂದ ಇನ್ನೊಂದು ಕಡ್ಡಿಗೆ ಹೋಗುವಾಗ ಯಾವ ಬಗೆಯಿಂದ ಒಂದು ಕಡ್ಡಿಯ ತುದಿಗೆ ಹೋಗಿ ಅಲ್ಲಿಂದ ಎರಡನೆಯ ಕಡ್ಡಿಯ ಮೇಲೆ ತನ್ನ ಶರೀರವನ್ನು ಎಳೆದುಕೊಂಡು ಮೊದಲನೆಯ ಕಡ್ಡಿಯನ್ನು ಬಿಟ್ಟುಬಿಡುವದೊ ಆ ಪ್ರಕಾರವೆ ಆತ್ಮನು ಒಂದು ಶರೀರವನ್ನು ಬಿಟ್ಟು ಇನ್ನೊಂದಕ್ಕೆ ಪ್ರಯಾಣ ಮಾಡುವನು. ಈ ಆತ್ಮನೆ ಬ್ರಹ್ಮನು. ಅವನು ವಿಜ್ಞಾನಮಯನು, ಮನೋಮಯನು, ಪ್ರಾಣಮಯನು, ಚಕ್ಷುರ್ಮಯನು, ಪೃಥ್ವೀಮಯನು. ಅಥವಾ ಹೀಗೆ ವಿವರವಾಗಿ ಹೇಳುತ್ತ ಕೂಡುವದಕ್ಕಿಂತ ಅವನು ಸರ್ವಮಯನು, ಸರ್ವ ಚರಾಚರಗಳಲ್ಲಿ ವ್ಯಾಪ್ತನು ಎಂದರೆ ಸಾಕು. ಪುರುಷನು ಹೇಗೆ ಆಚರಿಸುವನೋ ಹಾಗೆ ಆಗುವನು. ಒಳಿತು ಮಾಡುವವನು ಒಳಿತಾಗುವನು. ಕೆಡಕು ಮಾಡುವವನು ಕೆಡಕಾಗುವನು. ಪುಣ್ಯದಿಂದ ಪುಣ್ಯವಂತನೂ ಪಾಪದಿಂದ ಪಾಪಿಷ್ಠನೂ ಆಗುವನು. ಪುರುಷನಲ್ಲಿ ಯಾವ ಬಗೆಯ ಕಾಮನೆಗಳೊ ಆ ಬಗೆಯ ಸಂಕಲ್ಪವು ಕಂಡುಬರುವದು. ಯಾವ ಬಗೆಯ ಸಂಕಲ್ಪವಿರುವದೊ ಆ ಬಗೆಯ ಕರ್ಮವು ಅವನಿಂದ ಆಗುವದು. ಯಾವ ಕರ್ಮ ಮಾಡುವನೊ ಆ ಬಗೆಯ ಫಲವು ಅವನಿಗೆ ದೊರಕುವದು. ಕಾಮನಾಪೂರ್ಣನು ತದನುರೂಪ ಕರ್ಮಮಾಡಿ ಪುನರ್ಜನ್ಮ ಹೊಂದುವನು. ನಿಷ್ಕಾಮನು, ಕಾಮನಾರಹಿತನು, ಆತ್ಮಕಾಮನು ಮರಣ ಪೂರ್ವದಲ್ಲಿಯೆ ಬ್ರಹ್ಮರೂಪನಾಗುವನು. ಹೃದಯಸ್ಥ ಕಾಮನೆಗಳೆಲ್ಲ ನಾಶಹೊಂದಿದವೆಂದರೆ ಮರ್ತ್ಯನು ಅಮೃತನಾಗಿ

ಬ್ರಹ್ಮಭಾವವನ್ನು ಪಡೆಯುವನು. ಹಾವಿನ ಪರೆಯು ಉಚ್ಚಿ ಬೀಳುವಂತೆ ಇಂಥ ಜ್ಞಾನಿಯ ಶರೀರವು ಇಲ್ಲಿಯೆ ಕಳಚಿ ಬೀಳುವದು. ಈ ಜ್ಞಾನ ಮಾರ್ಗವು ಅತ್ಯಂತ ಸೂಕ್ಷ್ಮವೂ ಪುರಾತನವೂ ಇರುವದು. ಇದೇ ಮಾರ್ಗ ದಿಂದ ನಾನು ಪೂರ್ಣ ಸಿದ್ಧಿಯನ್ನು ಪಡೆದಿರುವೆನು. ಅದನ್ನೆ ನಾನು ನಿನಗೆ ಹೇಳಿರುವೆನು. ಅತೀತನಾದ ಈ ಆತ್ಮನೆ ಪುರುಷನೆಂದು ತಿಳಿದುಕೊಂಡರೆ ನೀನು ಶರೀರಸಂತಾಪಗಳಿಂದ ಮುಕ್ತನಾಗುವಿ. ಅನೇಕ ಸಂದೇಹ ಸಂಕಟಗಳ ಅಡವಿಯಂತಿರುವ ಈ ಶರೀರದಲ್ಲಿಯ ಶುದ್ಧಾತ್ಮನನ್ನರಿತವನು ಅಂದರೆ ಬ್ರಹ್ಮ ಸಾಕ್ಷಾತ್ಕಾರ ಪಡೆದವನು, ವಿಶ್ವನಿರ್ಮಾತನೆ ಅಥವಾ ಸರ್ವಲೋಕಗಳ ಕರ್ತನೆ ಎನ್ನಬಹುದು. ಈ ಶರೀರದಲ್ಲಿರುವಾಗಲೆ ಈ ಬ್ರಹ್ಮನನ್ನು ನಾವು ಅರಿಯಬಲ್ಲೆವು. ಜ್ಞಾನಿಗಳಾದವರು ಅಮೃತರಾಗುವರು. ಮಿಕ್ಕವರು ದುಃಖ ಕ್ಕೀಡಾಗುವರು. ಮನುಷ್ಯನು ಒಮ್ಮೆ ನಿಜವಾಗಿ ಈ ಆತ್ಮನನ್ನು, ಈ ದಿವ್ಯ ಸತ್ಯವನ್ನು, ಭೂತ ವರ್ತಮಾನ ಭವಿಷ್ಯತ್ತುಗಳ ಈಶನನ್ನು ಸಾಕ್ಷಾತ್ಕರಿಸಿದ ನೆಂದರೆ ಅವನು ನಿರ್ಭಯನಾಗುವನು. ಈ ಸತ್ಯವನ್ನು ಅಂತಃಕರಣದಿಂದಲೆ ತಿಳಿದುಕೊಳ್ಳತಕ್ಕದ್ದು. ಬ್ರಹ್ಮನಲ್ಲಿ ನಾನಾತ್ವವೆಂಬುದು ಇಲ್ಲ. ಆತ್ಮನು ಸತ್ಯನು, ಒಬ್ಬನೇ ಒಬ್ಬನು, ಎಂದು ನಾವು ಗುರುತಿಸಲಿಕ್ಕೆಬೇಕು. ಕೇವಲ ಶಬ್ದಗಳ ಅಭ್ಯಾಸದಿಂದ ವಾಣಿಗೆ ದಣಿವು ಮಾತ್ರ ಆಗುವದು. ಅದರಿಂದ ಬ್ರಹ್ಮಜ್ಞಾನವಾಗದು. ಅಂತರ್ಹೃದಯದಲ್ಲಿರುವ ಆಕಾಶದಲ್ಲಿ ಆತ್ಮನಿರುವನು. ಅವನೇ ಸರ್ವರ ಈಶನು, ಸರ್ವರ ಅಧಿಪತಿಯು. ಅವನೇ ಎಲ್ಲವನ್ನು ನಿಯ-ಮಿಸುವನು. ಬ್ರಾಹ್ಮಣರು ವೇದಾಭ್ಯಾಸದಿಂದ ಅದನ್ನೆ ತಿಳಿಯಲಿಚ್ಛಿಸುವರು. ಯಜ್ಞ ದಾನ ತಪ ಉಪವಾಸಾದಿಗಳಿಂದಲೂ ಅರಿಯತಕ್ಕ ವಸ್ತುವು ಇದೇ. ಸನ್ಯಾಸಿಗಳು ಆಶ್ರಮವನ್ನು ಕೈಕೊಳ್ಳುವದು ಈ ಆತ್ಮನ ಇಚ್ಛೆಯಿಂದಲೆ. ಬ್ರಹ್ಮಜ್ಞಾನಿಯು ಪಾಪಪುಣ್ಯಾದಿ ದ್ವಂದ್ವಗಳಾಚೆಗೆ ಹೋಗುವನು. ಅವನ ಮಹಿಮೆಯು ನಿತ್ಯಸತ್ಯವಿರುವದು. ಅವನು ಕರ್ಮಾತೀತನು, ನಿಷ್ಪಾಪನು, ನಿಷ್ಕಲ್ಮಷನು, ನಿಃಸಂಶಯನು. ಸಮ್ರಾಟನೇ, ಇದೇ ಬ್ರಹ್ಮಲೋಕವು, ಈ ಜ್ಞಾನಸ್ಥಿತಿಯೆ ಬ್ರಹ್ಮಲೋಕವು.'

ಅತ್ಯಂತ ಇಷ್ಟವಾದ ಶ್ರೇಷ್ಠವಾದ ಈ ಜ್ಞಾನವನ್ನು ಕೇಳಿ ಜನಕನು ಪ್ರಸನ್ನನಾಗಿ ಅಂದದ್ದು, 'ಭಗವನ್ ಯಾಜ್ಞವಲ್ಕ್ಯಮುನಿಯೇ, ಈ ವಿದೇಹ ದೇಶವನ್ನು, ಅದೇಕೆ, ನನ್ನನ್ನು ಸಹ ನಿನ್ನ ಚರಣಕ್ಕೆ ಅರ್ಪಿಸುವೆನು.'

ಈ ಪೂರ್ಣ ಭಕ್ತಿಪೂರ್ವಕವಾದ ಸರ್ವಾರ್ಪಣವನ್ನು ಕೇಳಿ ಮುನಿಯು ಅಂದದ್ದು, 'ಸಮ್ರಾಟನೇ, ನನಗೆ ಈ ರಾಜ್ಯಾದಿಗಳಿಂದೇನು ? ನೀನು ಜೀವ-ನ್ಮುಕ್ತನಾಗಿರುವಿ. ಈ ರಾಜ್ಯವನ್ನು ನ್ಯಾಯದಿಂದ ಪ್ರತಿಪಾಲಿಸು ಮತ್ತು ಕರ್ತವ್ಯರತನಾಗು ನೀನು ಧನ್ಯನಾಗುವಿ.' ಹೀಗೆ ಆಶೀರ್ವದಿಸಿ ಯಾಜ್ಞ-ವಲ್ಕ್ಯನು ತನ್ನ ಆಶ್ರಮಕ್ಕೆ ಹೊರಟು ಹೋದನು.

## ೨೦. ಉಪನಿಷತ್ತುಗಳ ಸಾರೋಪದೇಶ

ಒಂದು ಗುರುಕುಲದಲ್ಲಿ ಉಪನಿಷತ್ತುಗಳ ಅಭ್ಯಾಸವೆಲ್ಲ ಮುಗಿದ ಬಳಿಕ ಒಂದು ದಿನ ಶಿಷ್ಯರೆಲ್ಲರೂ 'ಈ ದಿನ ಉಪನಿಷತ್ತುಗಳ ಸಾರಸರ್ವಸ್ವವನ್ನು ನಮಗೆ ಹೇಳಿರಿ' ಎಂದು ಗುರುಗಳನ್ನು ಕೇಳಿಕೊಂಡರು. ಆಗ ಗುರುಗಳು ಒಳ್ಳೇದು, ಎಂದು ಈ ಕೆಳಗಿನಂತೆ ಹೇಳಿದರು. ಅವರು ಅಂದದ್ದು, 'ಶಿಷ್ಯವರರೆ, ಎಲ್ಲ ಉಪನಿಷತ್ತುಗಳಲ್ಲಿ ಈಶಾವಾಸ್ಯವು ಬಹಳ ಮಹತ್ವದ್ದಿರುವದು. ಚಿಕ್ಕದಾದರೂ ಅದು ಗೂಢಾರ್ಥಗಳಿಂದ ತುಂಬಿದ್ದೂ ಸರ್ವ ಉಪನಿಷತ್-ಜ್ಞಾನ ಸಮನ್ವಯರೂಪವೂ ಇರುವದು. ಅದರ ಸಾರವನ್ನೂ ಮಿಕ್ಕ ಉಪನಿಷತ್ತುಗಳ ಸಾರವನ್ನೂ ನಿಮಗೆ ಹೇಳುವೆನು. ಚಿತ್ತಗೊಟ್ಟು ಆಲೈಸಿರಿ ಮತ್ತು ಈ ಜ್ಞಾನವನ್ನು ಸಾಕ್ಷಾತ್ಕರಿಸುವ ಪ್ರತಿಜ್ಞೆ ಮಾಡಿರಿ, ಅಂದರೆ ನಿಮ್ಮ ಪರಮ ಕಲ್ಯಾಣವಾಗುವದು.

'ಈ ವಿಶ್ವದಲ್ಲಿದ್ದ ದೃಶ್ಯಾದೃಶ್ಯ ಪದಾರ್ಥಗಳೆಲ್ಲ ಪರಮಾತ್ಮನ ವಾಸ-ಸ್ಥಾನಗಳೆ ಇರುವವು. ಪರಮತತ್ವವು ಎಲ್ಲೆಲ್ಲಿಯೂ ಒಂದೇ ಒಂದಾಗಿ ತುಂಬಿರುವದು. ಅವನು ಎಲ್ಲೆಲ್ಲಿಯೂ ವ್ಯಾಪ್ತನು. ಅವನು ನಮಗೆ ಅವಶ್ಯವೆಂದು ಕೊಟ್ಟ ವಸ್ತುಗಳನ್ನಷ್ಟೆ ಪ್ರಸಾದವೆಂಬ ಪವಿತ್ರ ಭಾವನೆಯಿಂದ ನಾವು ಸ್ವೀಕರಿಸತಕ್ಕದ್ದು ಮತ್ತು ಭೋಗಿಸತಕ್ಕದ್ದು. ನಮಗೆ ಅವಶ್ಯವಿದ್ದುದನ್ನು-ಳಿದು ಹೆಚ್ಚಿನ ವಸ್ತುಗಳನ್ನು ಅಥವಾ ಎರಡನೆಯವರ ವಸ್ತುಗಳನ್ನು ನಾವು ಮನಸಿನಿಂದ ಕೂಡ ಬಯಸಬಾರದು.

'ಮನುಷ್ಯನಿಗೆ ಈ ಲೋಕದಲ್ಲಿ ಒಂದು ನೂರು ವರ್ಷ ಆಯುಷ್ಯವಿರು

ವದು. ಈ ಆಯುಷ್ಯವನ್ನೆಲ್ಲ ನಾವು ಫಲಾಶೆಯನ್ನು ಬಿಟ್ಟು ಸರ್ವಲೋಕ ಹಿತವಾಗುವಂಥ ನಮ್ಮ ಕರ್ತವ್ಯಕರ್ಮವನ್ನು ಮಾಡುತ್ತಲೆ ಕಳೆಯತಕ್ಕದ್ದು. ಈ ಲೋಕದಲ್ಲಿ ನಮ್ಮ ಆಯುಷ್ಯದ ಸಾರ್ಥಕವಾಗಲು ಇದೊಂದೆ ಮಾರ್ಗವು. ಈ ಯೋಗ್ಯಮಾರ್ಗದಿಂದ ಸಾಗುವದರಿಂದಲೆ ಮನುಷ್ಯನು ಕರ್ಮಬಂಧನ ದಿಂದ ಅಲಿಪ್ತನಿದ್ದು ಕರ್ಮಮಾಡಬಲ್ಲನು.

'ಹೀಗೆ ಫಲಾಶೆ ಬಿಟ್ಟು ಸ್ವಧರ್ಮಾನುಸಾರವಾಗಿ ಕರ್ತವ್ಯಕರ್ಮ ವನ್ನು ಅಖಂಡ ಮಾಡುವ ಸಾಮರ್ಥ್ಯವು ನಮ್ಮಲ್ಲಿ ಉಂಟಾಗಬೇಕಾದರೆ ನಮಗೆ ಆತ್ಮಜ್ಞಾನವು, ತತ್ವದ ಅರಿವು, ಆವಶ್ಯವು. ಆತ್ಮಸ್ವರೂಪವನ್ನು ಯಾರು ತಿಳಿದುಕೊಳ್ಳುವದಿಲ್ಲವೊ ಅವರು ಅಜ್ಞಾನದಿಂದ ಆವೃತರಾಗಿ ಅಂಧಃ ಕಾರದಲ್ಲಿ ಸುತ್ತಾಡುವರು. ಆ ಆತ್ಮವೆಂದರೆ ಸರ್ವವ್ಯಾಪಿಯೂ ಏಕವೂ ಏಕಕಾಲಕ್ಕೆ ಎಲ್ಲೆಲ್ಲಿಯೂ ಇರುವಂತಹದೂ ಅತ್ಯಂತ ಸೂಕ್ಷ್ಮವೂ ಒಳ-ಹೊರಗೆ ದೂರ ಸಮೀಪ ಎಂಬ ಭೇದಗಳಿಲ್ಲದ್ದೂ ಎಲ್ಲಕ್ಕೂ ಅನಾದಿಯೂ ಅನಂತವೂ ಸರ್ವಾಂತರ್ಯಾಮಿಯೂ ಇರುವದು.

'ಯಾವನು ಆತ್ಮಸ್ವರೂಪವನ್ನು ಚನ್ನಾಗಿ ಗುರುತಿಸಿ ಸರ್ವ ಭೂತಗಳಲ್ಲಿ ಆತ್ಮನು ಮತ್ತು ಆತ್ಮನಲ್ಲಿ ಸರ್ವಭೂತಗಳು ಇರುವವೆಂಬುದನ್ನು ಸಾಕ್ಷಾತ್ಕರಿ ಸುವನೊ ಅವನು ಭಯರಹಿತನೂ ಜುಗುಪ್ಸಾರಹಿತನೂ ಆಗಬಲ್ಲನು. ಸರ್ವವೂ ಆತ್ಮಮಯವು, ಆತ್ಮನ ಹೊರತು ಎಲ್ಲೆಲ್ಲಿಯೂ ಏನೂ ಇಲ್ಲ ಎಂದು ಸಾಕ್ಷಾತ್ಕರಿಸುವವನು ಅದಕ್ಕೂ ಒಂದು ಹೆಜ್ಜೆ ಮುಂದೆ ಹೋದಂತೆ. ಸರ್ವ ಭೂತಗಳು ಆತ್ಮಮಯವಿರುವವು, ಎಂಬ ಏಕಾತ್ಮಭಾವವು ಯಾವನಲ್ಲಿ ನೆಲೆ ಗೊಳ್ಳುವದೊ ಅವನಿಗೆ ಶೋಕಮೋಹಗಳ ಬಾಧೆಯು ಎಲ್ಲಿಂದ ಬರಬೇಕು ?

'ಏಕಾಕಿಯೂ ತೇಜಸ್ವಿಯೂ ಅಶರೀರಿಯೂ ನಿರ್ದೋಷನೂ ಶುದ್ಧನೂ ನಿಷ್ಪಾಪನೂ ಜ್ಞಾನಸ್ವರೂಪನೂ ಸರ್ವವ್ಯಾಪಿಯೂ ಸ್ವಯಂಭುವೂ ಆದ ಆತ್ಮನು ಸರ್ವ ಚರಾಚರ ವಿಶ್ವವಸ್ತುಗಳ ಹುಟ್ಟಿಗೆ ಕಾರಣನು. ಅವನು ಮಾಡಿದ ಯಥಾಯೋಗ್ಯ ನಿಯಮಗಳಿಂದ ಈ ವಿಶ್ವವು ಶಾಶ್ವತವಾಗಿ ಬದ್ಧವು.

'ಈ ವಿಶ್ವವೆಲ್ಲ ಆತ್ಮನ ಅಂಶಾವಿರ್ಭಾವವು, ಆತ್ಮನು ವಿಶ್ವದ ಅದೃಶ್ಯ ಏಕಾಕಿಯಾದ ನಿಯಾಮಕನು. ಈ ವಿಶ್ವದ ಜ್ಞಾನವೂ ಬೇಕು, ಆ ಆತ್ಮನ ಜ್ಞಾನವೂ ಬೇಕು. ಈ ವಿಶ್ವ ಮತ್ತು ಆ ಆತ್ಮ ಇವರ ಅನ್ಯೋನ್ಯ ಸಂಬಂಧದ

ಯಥಾರ್ಥ ಜ್ಞಾನವೆ ಸರ್ವಶ್ರೇಷ್ಠವು. ಮಿಕ್ಕ ಎಲ್ಲ ಜ್ಞಾನವು ಏಕಾಂಗಿಯು. ಅರ್ಥಾತ್ ಅಲ್ಪವು. ಪೂರ್ಣಜ್ಞಾನವೆ ಇಹಪರಗಳಲ್ಲಿ ಸುಖದಾಯಕವು. ಪೂರ್ಣ ಜ್ಞಾನಮಾಡಿಕೊಂಡು ನಾವು ಅದರಂತೆ ನಡೆಯದಿದ್ದರೆ ನಮಗೆ ನಿಜ ಸುಖವು ಎಂದಿಗೂ ಆಗದು. ಇಹದಲ್ಲಿ ಅಭ್ಯುದಯ, ಪರದಲ್ಲಿ ನಿಃಶ್ರೇಯಸ, ದೇಹಕ್ಕೆ ಪುಷ್ಟಿ, ಮನಕ್ಕೆ ತುಷ್ಟಿ, ಆತ್ಮಕ್ಕೆ ಶಾಂತಿ ಇವು ಪ್ರಾಪ್ತವಾಗ ಬೇಕಾದರೆ ವಿಶ್ವ ಮತ್ತು ಆತ್ಮ ಇವುಗಳ ಬರಿಯ ಪ್ರತ್ಯೇಕ ಜ್ಞಾನವಲ್ಲದೆ, ಇವುಗಳ ಪರಸ್ಪರ ಸಂಬಂಧದ ಸಮನ್ವಯ ಜ್ಞಾನವು ಅವಶ್ಯವು.

'ಸತ್ಯವು, ಸತ್‌ವಸ್ತುವು ಅತ್ಯಂತ ಸೂಕ್ಷ್ಮವಿರುವದರಿಂದ ಮತ್ತು ಈ ಬಾಹ್ಯ ವಿಶ್ವವಸ್ತುಗಳಿಂದ ಮೋಹಕವಾಗಿ ಆಚ್ಛಾದಿಸಲ್ಪಟ್ಟಿರುವದರಿಂದ ಅದರ ಜ್ಞಾನವು ಸಹಜ ಮತ್ತು ಸಹಸಾ ಆಗುವದಿಲ್ಲ. ಸ್ವಾರ್ಥ, ಕಾಮನೆ, ಅಹಂಕಾರ, ದ್ವೇಷಾಸೂಯೆ ಹೀಗೆ ಅನೇಕ ಭಾವನೆಗಳಿಂದ ನಮ್ಮ ಬುದ್ಧಿಯು ವ್ಯಾಪ್ತವಿರುವದರಿಂದ ಈ ಸತ್ಯವನ್ನು ಗುರುತಿಸಲು ಅದು ಅಸಮರ್ಥವಿರುವದು. ಆದುದರಿಂದ ಅದನ್ನು ಶುದ್ಧೀಕರಿಸುವದು ಮೊದಲನೆಯ ಕೆಲಸವು. ನಾವು ಆಹಾರಶುದ್ಧಿಯಿಂದ ಪ್ರಾರಂಭ ಮಾಡಬೇಕು. ಚಿತ್ತಶುದ್ಧಿಗೆ ಆಹಾರ ಶುದ್ಧಿಯೂ ಒಂದು ಸಾಧನವು. ಅಹಂಕಾರಾದಿ ಭಾವಗಳನ್ನು ನಾವು ಬೀಸಾಡಲಿಕ್ಕೆ ಬೇಕು. ಇಂದ್ರಿಯಜಯ ಮತ್ತು ಮನೋಜಯ ಇವುಗಳನ್ನು ಸಾಧಿಸಲಿಕ್ಕೆ ಬೇಕು. ಸತ್ಯ, ಅಹಿಂಸೆ, ಅಸ್ತೇಯ, ಬ್ರಹ್ಮಚರ್ಯ ಇವುಗಳನ್ನು ಆಚರಿಸಲಿಕ್ಕೆ ಬೇಕು. ಉತ್ಕಟಭಾವದಿಂದ ಸತ್ಯಶೋಧವನ್ನು ನಡೆಸಲಿಕ್ಕೆ ಬೇಕು. ಆತ್ಮನಿರೀಕ್ಷಣೆಯಲ್ಲಿ ತೊಡಗಲಿಕ್ಕೆ ಬೇಕು. ಶ್ರದ್ಧೆ, ಏಕಾಂತ, ತಪಸ್ಸು ಇವು ಅವಶ್ಯ. ಅಧ್ಯಾತ್ಮದ ಅನುಭವ ಪಡೆದವರ ಸುಸಂಗವೂ ಅವಶ್ಯವು. ಇಷ್ಟೆಲ್ಲ ಮಾಡುತಿರುವಾಗ ಸ್ವಕರ್ಮವೆಂಬುದನ್ನು ಅತ್ಯಂತ ನಿಷ್ಠೆಯಿಂದಲೂ ದಕ್ಷತೆಯಿಂದಲೂ ಆದರೆ ನಿಷ್ಕಾಮ ಭಾವನೆಯಿಂದ ನಾವು ಮಾಡುತಿರಲಿಕ್ಕೆ ಬೇಕು. ಅಂದರೆ ನಮ್ಮ ಭಾವವು ತಿಳಿಯಾಗಿ ಆತ್ಮಮಯವಾಗುವದು, ಚಿತ್ತವು ಸ್ಥಿರಗೊಳ್ಳುವದು. ನಾವು ಆಮೇಲೆ ಸತ್ಯದರ್ಶನವನ್ನು ಪಡೆಯಲು ಸಮರ್ಥರಾಗುವೆವು. ಒಮ್ಮೆ ಸತ್ಯದರ್ಶನವಾಯಿತೆಂದರೆ ಮುಂದೆ ಯಾವ ಭಯವೂ ಇಲ್ಲ. ಯಾಕಂದರೆ ಕ್ರಮವಾಗಿ ಆ ದರ್ಶನವೆ ಸ್ಥಿರವಾಗಿ ಸಾಧಕನು ನಿತ್ಯಸಾಕ್ಷಾತ್ಕಾರಿಯಾಗುವನು.

'ಸತ್ಯಸಾಕ್ಷಾತ್ಕಾರಿಯಾದವನ ದಿವ್ಯದೃಷ್ಟಿಯನ್ನೂ ಆತ್ಮವೈಭವವನ್ನೂ

ಆನಂದಪರಮಾವಧಿಯನ್ನು ಎಷ್ಟೆಂದು ವರ್ಣಿಸಬೇಕು? ಅವನು ಆತ್ಮೌಪಮ್ಯ ದೃಷ್ಟಿಯುಳ್ಳವನಾಗುವನು. ಅಂದರೆ ಅವನಿಗೆ ತಾನು ಮತ್ತು ಇತರರು ಇವರಲ್ಲಿ ಯಾವ ಭೇದವೂ ಇಲ್ಲದಂತಾಗುವದು. ಅವನು ಸಮದರ್ಶಿಯಾಗುವನು. ಅವನ ಅಂತಃಕರಣವು ಪ್ರೇಮಪೂರ್ಣವಾಗುವದು. ಹಸುಕೂಸಿನ ಮನದಂತೆ ಅವನ ಮನಸು ನಿರ್ಮಲವೂ ಕೋಮಲವೂ ಆಗುವದು. ಈ ರೀತಿ ನಿರ್ಮಲಾಂತಃಕರಣಿಯಾದವನು ತಾನು ಅಮೃತ ಆತ್ಮನು ಎಂಬ ಅನುಭವದಿಂದ ಪೂರ್ಣನಿರುವದರಿಂದ ಆನಂದದಲ್ಲಿ ನಲಿದಾಡುವನು. ಜಗತ್ತಿನ ವಿಷಯಕ್ಕೆ ಅವನ ಅಂತಃಕರಣದಲ್ಲಿ ಅತ್ಯಂತ ಪ್ರೇಮವು ತುಂಬಿರುವದು. ಅವನ ಕರ್ಮಗಳೆಲ್ಲ ನಿಸರ್ಗಕ್ರಿಯೆಗಳಂತೆ ನಿರ್ದೋಷವೂ ಸಹಜವೂ ಸಮವೂ ಕಲ್ಯಾಣಕಾರಕವೂ ಇರುವವು. ಅವನು ಸತತವೂ ಸರ್ವಲೋಕಹಿತರತನು. ತಾನು ಮಾಡುತಿರುವ ಕರ್ಮಗಳಿಂದ ಅವನು ಅಲಿಪ್ತನಿರುವನು. ಅವನು ದ್ವಂದ್ವಾತೀತನಿರುವನು. ಈ ಬಗೆಯಾಗಿ ಅತ್ಯಂತ ಉಚ್ಚ ಅಧ್ಯಾತ್ಮಪದವಿಯನ್ನು ಪಡೆದು ಅವನು ತನ್ನ ಶಕ್ತಿಸರ್ವಸ್ವವನೆಲ್ಲ ವಿಶ್ವದಲ್ಲಿ ಶಾಂತಿ, ಪ್ರೇಮ, ಆನಂದಗಳ ಸಾಮ್ರಾಜ್ಯವನ್ನು ನೆಲೆಗೊಳಿಸಲು ಉಪಯೋಗಿಸುವನು.

‘ನನ್ನ ನಲ್ಮೆಯ ಶಿಷ್ಯರೇ, ನೀವೂ ಈ ಉಪನಿಷದುಪದೇಶವನ್ನು ಕೇಳಿ ಉಪನಿಷದುಕ್ತ ಮಾರ್ಗಗಳಿಂದ ಸಾಗಿ ಆ ಸ್ವರಾಟ್ ಪದವಿಯನ್ನು ಪಡೆಯಿರಿ. ಆತ್ಮನಿಗೆ ಸ್ವಾಭಾವಿಕವಾದ ಜ್ಞಾನಬಲಕ್ರಿಯೆಗಳಿಂದ ಯುಕ್ತರಾಗಿ ಪ್ರೇಮಪ್ರೇರಿತರಾಗಿ ಸ್ವಕರ್ಮದಲ್ಲಿ ದಕ್ಷರಾಗಿರಿ ಮತ್ತು ಪರಮ ಶಾಂತಿ ಹಾಗೂ ಆನಂದದ ಭೋಕ್ತೃಗಳಾಗಿರಿ.’

**ಓಂ ಶಾಂತಿಃ ಪುಷ್ಟಿಸ್ತುಷ್ಟಿರಸ್ತು**

# ಶಬ್ದಾರ್ಥ

ಅನಶನ : ಉಪವಾಸ
ಅಮಾನಿತ್ವ : ಅಹಂಕಾರವಿಲ್ಲದಿರುವಿಕೆ
ಅರಸು : ಶೋಧಿಸು, ಹುಡುಕು
ಅಹಂಮನ್ಯ : ನಾನೇ ದೊಡ್ಡವನು ಎಂದು ತಿಳಿಯುವವ
ಅಹಮಹಮಿಕೆ : ನಾನು, ನಾನು ಎಂಬ ಅಹಂಕಾರ
ಅಳವಡಿಸು : ದೊರಕಿಸು, ಪ್ರಾಪ್ತ ಮಾಡಿಕೊಳ್ಳು
ಅಕ್ಷಿಪುರುಷ : ಕಣ್ಣಲ್ಲಿ ಕಾಣುವ ಪುರುಷ
ಅಭ್ರ : ತಿಳಿನೋಡ
ಅಂತರ್ಧಾನ : ಗುಪ್ತವಾಗುವಿಕೆ

### ಆ

ಆಕಲಿಸು : ತಿಳಿದುಕೊಳ್ಳು
ಆಚಾರ್ಯಕುಲ : ಗುರುಕುಲ
ಆಪ್ತಕಾಮ : ಇಷ್ಟವನ್ನು ಪಡೆದವ
ಆಯತನ : ಆಶ್ರಯಸ್ಥಾನ
ಆವಿರ್ಭವಿಸು : ವ್ಯಕ್ತವಾಗು

### ಈ

ಈಡೇರು : ಪೂರ್ಣವಾಗು

### ಉ

ಉಪ್ಪವಡಿಸು : ಏಳು
ಉತ್ಪಾತವಿದ್ಯೆ : ಭಾವೀ ಶುಭಾಶುಭ ತಿಳಿಸುವ ವಿದ್ಯೆ

### ಋ

ಋತ್ವಿಕ್ಕು : ಯಜ್ಞದಲ್ಲಿಯ ಅಧಿಕಾರಿ

### ಐ

ಐದುವದು : ಮುಟ್ಟುವದು, ಹೋಗುವದು

### ಒ

ಒರಗು : ಅಪ್ಪಾಗು, ಮಲಗು

### ಕ

ಕರ್ಮಠ : ನಿತ್ಯ ಧಾರ್ಮಿಕ ಕರ್ಮಗಳನ್ನು ನೇಮದಿಂದ ಮಾಡುವವ
ಕೃಶ : ಬಡಕ
ಕೋಟಲೆಗೊಳ್ಳು : ಸಂಕಟಪಡು
ಕವಡಿಚುಂಬಕ : ಜಿಪುಣ

### ಗ

ಗಾವುದ : ನಾಲ್ಕು ಹರದಾರಿ
ಗಾರುಡ : ಸರ್ಪವಿದ್ಯೆ

### ಚ

ಚಿತ್ತೈಸು : ಲಕ್ಷಗೊಡು
ಚಿತ್+ರೂಪ : ಚೈತನ್ಯಸ್ವರೂಪ

### ತ

ತುಸು : ಸ್ವಲ್ಪ
ತ್ವಕ್ಕು : ತ್ವಚೆ, ಮೈಚರ್ಮ
ತುರೀಯ ಅವಸ್ಥೆ : ನಿರ್ವಿಕಲ್ಪ ಸಮಾಧಿ ಸ್ಥಿತಿ

## ದ – ಧ

ದರ್ಪೋಕ್ತಿ : ಗರ್ವದ ಮಾತು
ಧಾರೆಯೆರೆ : ಅರ್ಪಿಸು
ದ್ವೈತಸೃಷ್ಟಿ : ವಿವಿಧವಾಗಿ ಅನೇಕವಾಗಿ ಕಾಣುವ ಸೃಷ್ಟಿ
ದೊರೆಕೊಳು : ಪ್ರಾಪ್ತನಾಗು

## ನ

ನಲ್ಲೆ : ಪ್ರಿಯಳೆ
ನಿರ್ವ್ಯಾಜ : ಸರಲಸ್ವಭಾವದ
ನಿರವಯ : ಅವಯವರಹಿತ, ಅಖಂಡ
ನೀಟಾದ : ಸರಲವಾದ

## ಪ – ಫ

ಪ್ರತಿಲೋಮ : ಶಿಷ್ಟಾಚಾರವಿರುದ್ಧ
ಪ್ರಾಣಧ್ಯಾನ : ಪ್ರಾಣದ ಧ್ಯಾನ
ಫಟ್ಟುಮಾಡು : ಫಜೀತಿ ಮಾಡು

## ಬ – ಭ

ಬಡಿವಾರ : ಬುಬ್ಬುಣಚಾರ
ಬೆಸಸು : ಹೇಳು, ಆಜ್ಞಾಪಿಸು
ಬ್ರಹ್ಮವಿದ : ಬ್ರಹ್ಮಜ್ಞಾನಿ
ಬಳಿಸಾರು : ಹತ್ತಿರಹೋಗು
ಬಿಂಕ : ಗರ್ವ

## ಮ

ಮುಗ್ಧ : ಅಜ್ಞ, ನಿರ್ದೋಷ
ಮರಳು : ತಿರುಗು
ಮುಗಿಬೀಳು : ಹೆಚ್ಚಾಗಿ ನೆರೆ
ಮೊತ್ತ : ಸಮೂಹ

ವಂದಿ : ಭಟ್ಟಂಗಿ
ವ್ರತಸ್ಥ : ವ್ರತಪಾಲಿಸುವವ
ವಿಭೂತಿ : ಮಹಾನ್ ವ್ಯಕ್ತಿ, ಯಕ್ಷ
ವಿತ್ತ : ಧನ, ಸಂಪತ್ತು
ವಿರಮಿಸು : ಶಾಂತನಾಗು

## ಶ – ಸ

ಶ್ರಾದ್ಧಕಲ್ಪ : ಶ್ರಾದ್ಧಮಂತ್ರಗಳಿಪ್ಪ ವೇದಭಾಗ
ಶಿಕ್ಷಾ : ವೇದಗಳ ಉಚ್ಚಾರ ವಿದ್ಯೆ
ಸಂವೇದ : ಸ್ಪರ್ಶಜ್ಞಾನ, ಇಂದ್ರಿಯ ಜ್ಞಾನ
ಸ್ವರಾಟ್ : ತನ್ನನ್ನು ಗೆದ್ದವ
ಸಮಿತ್ಪಾಣಿ : ಸಮಿತ್+ಪಾಣಿ, ಕೈಯಲ್ಲಿ ಸಮಿಧೆ ಹಿಡಿದವ, ( ಶಿಷ್ಯರು ಈ ರೀತಿ ಗುರುಗಳ ಕಡೆಗೆ ಹೋಗುವ ಪದ್ಧತಿ ಇತ್ತು. )
ಸ್ವಾಧ್ಯಾಯ : ತಮ್ಮ ಪಾಲಿನ ವೇದ ಪಠಣ

## ಹ

ಹತ್ತಿಗೆ ಬರು (ಪ್ರಾಣ) : ಪ್ರಾಣಾಂತಿಕ ಅವಸ್ಥೆ ಆಗುವದು